# ಮೋಕ್ಷಗುಂಡಂ ವಿಶ್ವೇಶ್ವರಯ್ಯ

(ಜೀವನ ಚರಿತ್ರೆ)

ಮುನ್ನುಡಿ :

**ಶ್ರೀ ಕೆ. ಹನುಮಂತಯ್ಯ,** ಬಿ.ಎ., ಬಿ.ಎಲ್.

ಮೈಸೂರಿನ ಮಾನ್ಯ ಮುಖ್ಯ ಮಂತ್ರಿಗಳು

**ವಿ. ಯಸ್. ನಾರಾಯಣರಾವ್**

**ವಿಚಾರ ಸಾಹಿತ್ಯ ಲಿಮಿಟೆಡ್**

ಬಳೇಪೇಟೆ, ಬೆಂಗಳೂರು ಸಿಟಿ

ನೋತ್ಪದ್ಯತೇ ವಿನಾಜ್ಞಾನಂ
ವಿಚಾರೇಣಾನ್ಯ ಸಾಧನೈಃ

ರೂಪಾಯಿ ಎರಡು

ಇದೇ ಗ್ರಂಥ ಕರ್ತನಿಂದ:

| | | | |
|---|---|---|---|
| ರಷ್ಯದ ಯೋಜನೆ ಸಾಧನೆ | 1 | 2 | 0 |
| ಗಾಂಧೀವಾದ | 1 | 12 | 0 |
| ಮೂಲಭೂತ ಹಕ್ಕುಗಳು | 2 | 0 | 0 |
| ಭಾರತದ ಸಂವಿಧಾನ | 1 | 8 | 0 |
| ರಾಷ್ಟ್ರವಾಣಿ | 1 | 0 | 0 |
| ಆರೋಗ್ಯ ಸಂಗ್ರಾಮ | 1 | 0 | 0 |
| Thus Spake Mahatma | 0 | 8 | 0 |

Biography of Sir M. Visvesvaraya. Rs. 2/-

ಮುದ್ರಕರು: ಸಿ. ರಾಜಗೋಪಾಲಾಚಾರ್, ಇಂಡಿಯನ್ ಪ್ರೆಸ್, ಬೆಂಗಳೂರು ಸಿಟಿ.
ಪ್ರಕಾಶಕರು: ವಿ. ಯಸ್. ನಾರಾಯಣರಾವ್, ಮ್ಯಾನೇಜಿಂಗ್ ಡೈರೆಕ್ಟರ್,
ವಿಚಾರ ಸಾಹಿತ್ಯ ಲಿಮಿಟೆಡ್, ಬೆಂಗಳೂರು ಸಿಟಿ.

# ಮುನ್ನುಡಿ

ಮೈಸೂರು ಸಂಸ್ಥಾನವು ಪ್ರಕೃತಿಯ ಕೃಪೆಯಿಂದ ಹಲವು ವೈಶಿಷ್ಟ್ಯಗಳಿಗೆ ತೌರು ಮನೆಯಾಗಿದೆ. ಗೇರುಸೊಪ್ಪೆ ಮತ್ತು ಶಿವನ ಸಮುದ್ರ ಜಲಪಾತಗಳು, ಗೋಮಟೇಶ್ವರ ವಿಗ್ರಹ, ಕನ್ನಂಬಾಡಿ ಕಟ್ಟೆ, ಬೇಲೂರು ಹಳೇಬೀಡು ದೇವಾಲಯಗಳು ಮುಂತಾದವು ಮೈಸೂರಿನ ವೈಶಿಷ್ಟ್ಯದ ಹೆಗ್ಗುರುತುಗಳಾಗಿವೆ. ಪ್ರಕೃತಿಯ ಕೃಪೆ ಮೈಸೂರಿನ ಮೇಲಿರುವಂತೆಯೇ, ದೈವ ಕೃಪೆಯೂ ಮೈಸೂರಿನ ಮೇಲಿದೆ. ಮೈಸೂರಿನ ಮಾನವ ವೈಶಿಷ್ಟ್ಯದ ಹಿರಿಮೆಯನ್ನು ದಿಗಂತದ ವರೆಗೂ ಹರಡುವಂತೆ ಮಾಡಿರುವ ಮಹನೀಯರು ಕೆಲವರು ಮೈಸೂರಿನಲ್ಲಿಯೇ ಹುಟ್ಟಿದರು. ಇಂಥ ಮಹನೀಯರಲ್ಲಿ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ಅಗ್ರಗಣ್ಯರು.

ನಾನೊಂದುಬಾರಿ ಅವರೊಡನೆ ಮಾತನಾಡುತ್ತಿದ್ದೆ. ಆಗ ಅವರಿಗಿಂತಲೂ ವೃದ್ಧರು (೯೨ ವರ್ಷ) ಈ ಉನ್ನತ ಮಟ್ಟದಲ್ಲಿ ಇಲ್ಲವೆಂಬುದು ಮನಸ್ಸಿಗೆ ಹೊಳೆಯಿತು. ಹಾಗೆಯೇ ಶಿಸ್ತಿನ ಜೀವನ, ದೇಶಾಭ್ಯುದಯಕ್ಕೆ ಸಂಪೂರ್ಣವಾಗಿ ಮುಡುಪಿಟ್ಟ ಮೇಧಾಶಕ್ತಿ, ತಮ್ಮ ಆದಾಯದ ಹೆಚ್ಚು ಭಾಗವನ್ನು ಪರೋಪಕಾರಕ್ಕಾಗಿ ವಿನಿಯೋಗಿಸುವ ಉದಾರತೆ, ನಿಸ್ಪೃಹತೆಯಿಂದ ಕೂಡಿದ ಕಾರ್ಯತತ್ಪರತೆ—ಈ ಕಲ್ಯಾಣಗುಣಗಳೆಲ್ಲವೂ ಇರುವ ಮತ್ತೊಬ್ಬ ವ್ಯಕ್ತಿಯು ಸಿಗುವುದಿಲ್ಲವೆಂದೂ ಮನಸ್ಸಿಗೆ ಹೊಳೆಯಿತು.

ನಮ್ಮ ಜನತೆಗೆ, ಅದರಲ್ಲಿಯೂ ತರುಣರಿಗೆ, ಇವರ ಜೀವನವು ಮೇಲ್ಪಂಕ್ತಿಯಾಗಬೇಕು. ಜನರ ಮನೋವೃತ್ತಿಯನ್ನು ರೂಪಿಸಿ ಮೇಲ್ಮಟ್ಟಕ್ಕೆ ಎತ್ತಬೇಕು. ಈ ಉನ್ನತ ಕಾರ್ಯಸಾಧನೆಯಲ್ಲಿ ನನ್ನ ಸ್ನೇಹಿತರಾದ ಶ್ರೀ ವಿ. ಎಸ್. ನಾರಾಯಣರಾಯರು ತೊಡಗಿದ್ದಾರೆ. ವಿಶ್ವೇಶ್ವರಯ್ಯನವರ ಜೀವನ ಚರಿತ್ರೆಯನ್ನು ಸುಲಭ ಶೈಲಿಯಲ್ಲಿ, ಗ್ರಾಹ್ಯರೀತಿಯಲ್ಲಿ ಜನತೆಗೆ ದೊರಕಿಸಿಕೊಟ್ಟು ಉಪಕಾರ ಮಾಡಿದ್ದಾರೆ. ಇವರ ಕೆಲಸವು ಸ್ತುತ್ಯವೂ ಅಭಿನಂದನೀಯವೂ ಆಗಿದೆ.

ಕುಮಾರ ಕೃಪ
೮-೯-೫೨

**ಕೆ. ಹನುಮಂತಯ್ಯ**

# ಪೀಠಿಕೆ

ಮೈಸೂರು ಸಂಸ್ಥಾನದಲ್ಲಿ ವಿಶ್ವೇಶ್ವರಯ್ಯನವರ ಹೆಸರು ಮನೆ ಮಾತು. ವಿಶ್ವೇಶ್ವರಯ್ಯನಾಲೆ ಹರಿಯುವ ಮಂಡ್ಯ ಜಿಲ್ಲೆಯ ರೈತರು ತಮ್ಮ ಮನೆಗಳಲ್ಲಿ ಅವರ ಭಾವಚಿತ್ರವಿಟ್ಟು, ಪುಷ್ಪ ಅರ್ಪಿಸುತ್ತಾರೆ. ಅವರು ಅಷ್ಟು ಪೂಜನೀಯರು. ಭಾರತದ ಕೈಗಾರಿಕೆ ಮತ್ತು ವಾಣಿಜ್ಯ ಪ್ರಪಂಚಕ್ಕೆ ಅವರಲ್ಲಿ ವಿಶೇಷ ಗೌರವ. ದೇಶಾಭ್ಯುದಯ ಕಾರ್ಯಗಳಿಗೆ ವಾತಾವರಣವು ಹೆಚ್ಚು ಸಹಾಯಕವಾಗಿಲ್ಲದಿದ್ದಾಗಲೇ ಎಡರು ತೊಡರುಗಳನ್ನು ವಿಶ್ವೇಶ್ವರಯ್ಯನವರು ದಿಟ್ಟತನದಿಂದ ಎದುರಿಸಿ ಅಸಾಧ್ಯವನ್ನು ಸಾಧಿಸಿರುತ್ತಾರೆ. ದೇಶದ ಪ್ರಗತಿಗೆ ಸಹಾಯಕವಾದ ಸ್ವತಂತ್ರ ವಾತಾವರಣದಲ್ಲಿ ಅವರು ಇನ್ನೂ ಹೆಚ್ಚಿನ ಯಶಸ್ಸು ಗಳಿಸುತ್ತಿದ್ದರೆಂಬುದರಲ್ಲಿ ಸಂದೇಹವಿಲ್ಲ. ಇಂಥ ಮಹಾಪುರುಷರ ಸಂಕ್ಷಿಪ್ತ ಜೀವನ ಚರಿತ್ರೆಯನ್ನು ಕನ್ನಡಿಗರಿಗೆ ಒಪ್ಪಿಸುವ ಅವಕಾಶ ದೊರಕಿದ್ದಕ್ಕಾಗಿ ನಾನು ಧನ್ಯ.

ಈ ಪುಸ್ತಕಕ್ಕೆ, ರಾಜ್ಯಕಾರ್ಯದಲ್ಲಿ ಬಿಡುವಿಲ್ಲದೆ ಅವಿರತ ದುಡಿಯುತ್ತಿರುವ ಮೈಸೂರಿನ ಮಾನ್ಯ ಮುಖ್ಯ ಮಂತ್ರಿಗಳಾದ ಶ್ರೀ ಕೆಂಗಲ್ ಹನುಮಂತಯ್ಯನವರು, ವಿರಾಮ ಕಲ್ಪಿಸಿಕೊಂಡು, ಪ್ರೀತಿಯಿಂದ ಮುನ್ನುಡಿ ಬರೆದುಕೊಟ್ಟು ನನ್ನನ್ನು ಕೃತಜ್ಞನಾಗಿ ಮಾಡಿದ್ದಾರೆ. ಅವರಿಗೆ ನನ್ನ ವಂದನೆಗಳು.

ಈ ಪುಸ್ತಕದ ಕರಡು ಪ್ರತಿಯ ಪ್ರತಿ ಪಂಕ್ತಿಯನ್ನು ಸೂಕ್ಷ್ಮವಾಗಿ ಅವಲೋಕಿಸಿ, ವಿಷಯ ಸಂಗ್ರಹ ಮತ್ತು ನಿರೂಪಣೆಯಲ್ಲಿ ತಪ್ಪುಗಳಿಗೆ ಎಡೆಗೊಡದಂತೆ ವಿಶೇಷ ಸಹಾಯ ನೀಡಿದ ಮೈಸೂರು ರೈಲ್ವೆಗಳ ನಿವೃತ್ತ ಜನರಲ್ ಮ್ಯಾನೇಜರ್ ಶ್ರೀ ಎಚ್. ರಂಗಾಚಾರ್, ಎಂ.ಎ., ಅವರಿಗೆ ನಾನು ಬಹಳ ಋಣಿ. ಅವರ ಸೌಜನ್ಯ, ಸಹಾಯ ಎಂದಿಗೂ ಮರೆಯುವಂತಿಲ್ಲ. ಹಾಗೂ ಏನಾದರೂ ತಪ್ಪುಗಳಿದ್ದರೆ ಅದಕ್ಕೆ ಹೊಣೆ ನಾನು. ಶ್ರೀ ಎಂ. ಆರ್. ಕೃಷ್ಣಮೂರ್ತಿಯವರಿಂದಲೂ ವಿಶೇಷ

ನೆರವು ಪಡೆದಿರುತ್ತೇನೆ. ಗೆಳೆಯರಾದ ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರು ಭಾಷಾದೋಷಗಳನ್ನು ತಿದ್ದಿ ಕೊಟ್ಟಿರುತ್ತಾರೆ. ಈ ಪುಸ್ತಕ ಬರೆಯುವ ಪ್ರೇರೇಪಣೆ ಆದುದು ಅವರಿಂದಲೇ. ವಿಶ್ವೇಶ್ವರಯ್ಯನವರ ಸುಂದರವಾದ ಪಡಿಯಚ್ಚನ್ನು 'ಜೀವನ' ಪತ್ರಿಕೆಯ ಸಂಪಾದಕರಾದ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು ಕೊಟ್ಟಿರುತ್ತಾರೆ. ಇವರೆಲ್ಲರಿಗೂ ನನ್ನ ಅನಂತ ಧನ್ಯವಾದಗಳನ್ನು ಸಲ್ಲಿಸುತ್ತೇನೆ

ವಿಶ್ವೇಶ್ವರಯ್ಯನವರ ಜೀವನ ಚರಿತ್ರೆಯಿಂದ ಯುವಕರೂ, ವಿದ್ಯಾರ್ಥಿಗಳೂ ಅರಿತು ಅನುಸರಿಸಬೇಕಾದ ವಿಷಯಗಳು ಅನೇಕ ಇವೆ. ಅವರನ್ನು ಪ್ರೀತಿಸಿಯೇ ಈ ಪುಸ್ತಕವನ್ನು ಬರೆಯಲಾಗಿದೆ ಎಂದರೂ ತಪ್ಪಾಗದು

ವಿಶ್ವೇಶ್ವರಯ್ಯನವರ 92ನೆ ಜನ್ಮೋತ್ಸವ (15-9-52)ಕ್ಕೆ ಸರಿಯಾಗಿ ಈ ಪುಸ್ತಕವು ಹೊರಬೀಳುವಂತೆ ಕೂಡಿಬಂದದ್ದೂ ಒಂದು ಸುಯೋಗ.

ವಿ. ಯಸ್. ನಾರಾಯಣರಾವ್

# ವಿಷಯ ಸೂಚಿ



---

ತಿದ್ದುಪಡಿ

ಪುಟ, 2, ಪಂಕ್ತಿ 9. ತಾ 18 ಎಂದಿದೆ. ತಾ 15 ಎಂದಿರಬೇಕು.

# ವಿಶ್ವೇಶ್ವರಯ್ಯನವರ ಜೀವನ ಚರಿತ್ರೆ

---

## ಬೆಳೆಯುವ ಪೈರು

"ಭೋ" ಎಂದು ಕಿವಿಯನ್ನು ಕಿವುಡು ಮಾಡುವ ಆರ್ಭಟದಿಂದ ಭೋರ್ಗರೆಯುತ್ತಾ ಪರ್ವತವನ್ನು ಭೇದಿಸಿಕೊಂಡು ದಟ್ಟವಾದಕಾಡುಗಳ ಮಧ್ಯದಲ್ಲಿ ದಾರಿಬಿಡಿಸಿಕೊಂಡು ವೇಗವಾಗಿ ಪ್ರವಹಿಸುತ್ತಾ ಶರಾವತಿಯು ಗೇರುಸೊಪ್ಪೆಯಲ್ಲಿ ಜಲಪ್ರವಾಹವಾಗಿ ಧುಮ್ಮಿಕ್ಕುತ್ತದೆ. ಹತ್ತಿಯನ್ನು ಬಿಲ್ಲಿನಿಂದ ಹೊಡೆದು ಹಾಕಿದ ಬೆಳ್ಳನೆಯ ರಾಶಿ ಕೆಳಗಿಳಿಯುತ್ತಿರುವಂತೆ ಕಾಣುತ್ತದೆ; ದೂರದ ದೃಷ್ಟಿಗೆ ಈ ಜಲಪ್ರವಾಹ. ಸೂರ್ಯ ಕಿರಣಗಳು ಜಲ ಕಣಗಳಲ್ಲಿ ಹೊಕ್ಕು ಕಾಮನಬಿಲ್ಲಿನ ನಾನಾ ಬಣ್ಣಗಳು ತಂಡತಂಡವಾಗಿ ನೃತ್ಯ ಮಾಡುತ್ತಿರುವಂತೆ ಕಾಣುತ್ತದೆ. ಇಷ್ಟು ಎತ್ತರದಿಂದ ಧುಮ್ಮಿಕ್ಕುವ ಜಲಪಾತ ಬೇರೊಂದಿಲ್ಲ ಪ್ರಪಂಚದಲ್ಲಿ. ಈ ಭವ್ಯ ಭಯಂಕರ ನಯನ ಮನೋಹರ ದೃಶ್ಯವನ್ನು ನೋಡಲು ದೇಶ ವಿದೇಶಗಳಿಂದ ಸಾವಿರಾರು ಜನ ವರುಷ ವರುಷವೂ ಇಲ್ಲಿಗೆ ಬಂದು ಹೋಗುತ್ತಾರೆ. ಲೋಕ ಪ್ರಸಿದ್ಧವಾದ ಗೇರುಸೊಪ್ಪೆಯ ಜಲಪಾತವನ್ನು ನೋಡಿ ತಣಿದು ಆನಂದ ಪರವಶರಾಗದವರೇ ಇಲ್ಲ! ಅದೇನು ಸೃಷ್ಟಿಯ ಸೊಬಗು!

ಒಮ್ಮೆ ಒಬ್ಬ ವ್ಯಕ್ತಿಯ ಮೇಲೆ ಈ ಜಲಪಾತದ ದೃಶ್ಯ ಬೇರೆ ವಿಧವಾದ ಪರಿಣಾಮ ಮಾಡಿತು. "Oh! What a waste my countrymen!" "ಎಷ್ಟು ವ್ಯರ್ಥ, ಏನು ವ್ಯರ್ಥ. ಎಷ್ಟು ಅಪಾರ ಶಕ್ತಿ-ವಿದ್ಯುಚ್ಛಕ್ತಿ-ವೃಥಾ ವ್ಯರ್ಥವಾಗಿ ಹರಿದು ಹೋಗುತ್ತಿದೆ. ಇದನ್ನು

ಪಯೋಗಿಸಿಕೊಳ್ಳಲಾರೆವೇ ನಾವು" ಎಂದು ದೇಶಾಭಿಮಾನದಿಂದ ಮರುಗಿದ ಆ ಅಪೂರ್ವ ವ್ಯಕ್ತಿ. ಆ ವ್ಯಕ್ತಿಯೇ ನಮ್ಮ ಕಥಾನಾಯಕನಾದ ವಿಶ್ವೇಶ್ವರಯ್ಯ.

ಮೋಕ್ಷಗುಂಡಂ ಎಂಬುದು ಹೈದರಾಬಾದಿನ ಆಂಧ್ರ ಭಾಗಕ್ಕೆ ಸೇರಿದ ಒಂದು ಗ್ರಾಮ. ಅದು ವಿಶ್ವೇಶ್ವರಯ್ಯನವರ ಪೂರ್ವಜರ ನಿವಾಸ ಸ್ಥಾನ. ಆದರೆ ಅನೇಕ ತಲೆಮಾರುಗಳ ಹಿಂದೆಯೇ ವಿಶ್ವೇಶ್ವರಯ್ಯನವರ ಪೂರ್ವಿಕರು ಮೈಸೂರು ಸೀಮೆಗೆ ಬಂದು ನೆಲಸಿದ್ದರು. ಅವರು ಹುಟ್ಟಿ ಬೆಳೆದದ್ದು ಮೈಸೂರಿನಲ್ಲಿ. ಕೋಲಾರ ಜಿಲ್ಲೆಯ ಚಿಕ್ಕಬಳ್ಳಾಪುರ ತಾಲ್ಲೂಕು ಮುದ್ದೇನಹಳ್ಳಿ ಎಂಬ ಗ್ರಾಮದಲ್ಲಿ. ಜನನ ೧೮೬೧ನೇ ಇಸವಿ ಸೆಪ್ಟಂಬರ್ ೧೫ರಲ್ಲಿ. ಇದೇ ವರುಷದಲ್ಲಿಯೇ ಭಾರತದ ನಿಜ ಜವಾಹಿರ್ ಆದ ಜವಾಹರ್ ಲಾಲನ ತಂದೆ ತ್ಯಾಗವೀರ ಮೋತೀಲಾಲ್ ನೆಹರು; ಕಾಶಿ ಹಿಂದೂ ವಿಶ್ವವಿದ್ಯಾನಿಲಯದ ಜನ್ಮದಾತೃ ಪಂಡಿತ್ ಮದನ ಮೋಹನ ಮಾಲವೀಯ; ಭಾರತದ ಭವ್ಯ ಕಾಂತಿಯನ್ನು ದಶದಿಕ್ಕುಗಳಿಗೂ ಪಸರಿಸಿದ ಗುರುದೇವ ಕವಿ ಸಾರ್ವಭೌಮ ರವೀಂದ್ರನಾಥ ಠಾಕೂರ್ ಜನ್ಮ ತಾಳಿದರು

ವಿಶ್ವೇಶ್ವರಯ್ಯನವರ ತಂದೆಯ ಹೆಸರು ಶ್ರೀನಿವಾಸ ಶಾಸ್ತ್ರಿಗಳು. ಅವರು ಕಾಶಿಯಲ್ಲಿ ಹತ್ತು ವರುಷ ಯೋಗಾಭ್ಯಾಸ, ವಿದ್ಯಾವ್ಯಾಸಂಗ ಮಾಡಿದವರು. ಹಳೆಯ ಸಾಂಪ್ರದಾಯಿಕರು. ಉತ್ತಮಕುಲ ಪ್ರಸೂತರು. ಸಾಹಿತ್ಯದಲ್ಲಿ, ಸಂಸ್ಕೃತದಲ್ಲಿ ಅವರಿಗೆ ಒಳ್ಳೆಯ ಜ್ಞಾನ. ಇದ್ದ ಸ್ವಲ್ಪ ಹೊಲವನ್ನು ಸಾಗುವಳಿ ಮಾಡಿಸುತ್ತಾ, ಆಯುರ್ವೇದ ವೈದ್ಯದಿಂದ ಜನ ಸೇವೆ ಸಲ್ಲಿಸುತ್ತಾ ಸತ್ಪ್ರವೃತ್ತಿನಿರತರಾಗಿ ಸಂಸಾರವನ್ನು ನಿರ್ವಹಿಸುತ್ತಿದ್ದರು ಅವರಿಗೆ ಒಂದು ಹೆಣ್ಣು ಮಗು, ಮೂವರು ಗಂಡು ಮಕ್ಕಳು. ಕಾಶಿ ವಿಶ್ವೇಶ್ವರನ ನಾಮಾಂಕಿತನಾದ ವಿಶ್ವೇಶ್ವರನೇ ಎರಡನೆಯ ಮಗ.

ಹಳೆಯ ಸಾಂಪ್ರದಾಯಿಕರಾದ ಶ್ರೀನಿವಾಸ ಶಾಸ್ತ್ರಿಗಳು ಕಾಶಿ ರಾಮೇಶ್ವರ ತೀರ್ಥಯಾತ್ರೆಗಳನ್ನು ಸಂಸಾರ ಸಹಿತ ಪಾದಚಾರಿಗಳಾಗಿಯೆ ನಡೆಸಿದ್ದರು. ರಾಮೇಶ್ವರಕ್ಕೆ ತೀರ್ಥಯಾತ್ರೆ ಹೋಗುತ್ತಿದ್ದಾಗ ದಾರಿಯಲ್ಲಿ ದೊರೆತ ಶ್ರೀರಂಗದಲ್ಲಿ ವಿಶ್ವೇಶ್ವರನಿಗೆ ಉಪನಯನ ಕರ್ಮವೂ ಆಯಿತು.

ಶ್ರೀನಿವಾಸಶಾಸ್ತ್ರಿಗಳು ಶ್ರೀಮಂತರಲ್ಲ. ಮಕ್ಕಳಿಗೆ ವಿದ್ಯಾ ಶಿಕ್ಷಣ ಕೊಡಿಸುವಷ್ಟು ಚೈತನ್ಯವೂ ಇರಲಿಲ್ಲ. ವಿಶ್ವೇಶ್ವರಯ್ಯನವರ ಲೋಯರ್ ಸೆಕಂಡರಿ ವರೆಗಿನ ವಿದ್ಯಾಭ್ಯಾಸ ಚಿಕ್ಕಬಳ್ಳಾಪುರದಲ್ಲಿಯೇ ನಡೆಯಿತು. ಮುಂದಿನ ವ್ಯಾಸಂಗ ಬೆಂಗಳೂರಿನಲ್ಲಿ. ವಿಶ್ವೇಶ್ವರಯ್ಯನವರು ಹುಡುಗರಿಗೆ ಮನೆಯಲ್ಲಿ ಪಾಠ ಹೇಳಿಕೊಡುತ್ತಾ ಬಂದ ಹಣದಿಂದ ತಮ್ಮ ವಿದ್ಯಾಭ್ಯಾಸ ವನ್ನು ಮುಂದುವರಿಸುತ್ತಿದ್ದರು. ಬಿಗುಮಾನದ ಶಿಸ್ತಿನ ನಡತೆ ಅವರಲ್ಲಿ ಸಣ್ಣ ವಯಸ್ಸಿನಿಂದಲೂ ಕಂಡು ಬರುತ್ತಿತ್ತು. ತಮ್ಮಲ್ಲಿ ಪಾಠ ಕಲಿಯು ತ್ತಿದ್ದ ವಿದ್ಯಾರ್ಥಿಗಳು ಪಾಠವನ್ನು ಸರಿಯಾಗಿ ಒಪ್ಪಿಸದಿದ್ದರೆ ಅವರನ್ನು ಬೆಂಚಿನ ಮೇಲೆ ನಿಲ್ಲಿಸಿ ಶಿಕ್ಷಿಸುತ್ತಿದ್ದರು. ತಪ್ಪಿಗೆ ತಕ್ಕ ಶಿಕ್ಷೆ. ಅವರು ಸೋಮಾರಿತನವನ್ನು ಸಹಿಸರು. ಅಂದಿನ ಪಾಠ ಪ್ರವಚನವನ್ನು ಅಂದೇ ಮಾಡಿ ಮುಗಿಸಬೇಕು; ನಾಳೆ ಎಂದು ಹೇಳುವಂತಿಲ್ಲ. ಅವರು ನಿಷ್ಠುರ ಶಾಸಕರು. ಬೆಳೆಯುವ ಪೈರು ಮೊಳೆಯಲ್ಲೇ ಕಾಣುತ್ತದೆ ಎಂಬಂತೆ ಅಂದಿನಿಂದಲೂ ಅವರು ಕ್ರಮ ಪ್ರಿಯರು, ನಿಯಮ ಮತ್ತು ಕಾಲಬದ್ಧರು.

ಚಿಕ್ಕಬಳ್ಳಾಪುರದಲ್ಲಿ ಓದುತ್ತಿದ್ದಾಗ ಶ್ರೀ ಕೃಷ್ಣಗಿರಿ ರಾಘವೇಂದ್ರ ರಾವ್ ಎಂಬುವರು ವಿಶ್ವೇಶ್ವರಯ್ಯನವರ ಉಪಾಧ್ಯಾಯರಾಗಿದ್ದರು ಶಿಷ್ಯನ ಅಸಾಧಾರಣ ಬುದ್ಧಿ ಸಾಮರ್ಥ್ಯ ಕಂಡು ಗುರುಗಳಿಗೆ ಅವನಲ್ಲಿ ಅತೀವ ಪ್ರೇಮ ಅಂತೆಯೇ ಶಿಷ್ಯನಿಗೂ ಗುರುವಿನಲ್ಲಿ ಅನನ್ಯ ಪೂಜ್ಯ ಭಾವನೆ ಅನೇಕ ವರುಷಗಳ ತರುವಾಯ ನಡೆದ ಒಂದು ಘಟನೆಯಿಂದ ಇದು ತಿಳಿದು ಬರುತ್ತದೆ.

ಶ್ರೀ ರಾಘವೇಂದ್ರರಾಯರು ಉಪಾಧ್ಯಾಯ ವೃತ್ತಿಯಿಂದ ಸಂಸಾರ ನಿರ್ವಹಣೆಗೆ ಸಾಕಷ್ಟು ವರಮಾನ ಬಾರದೆಂದು ಮನಗಂಡು ಉಪಾಧ್ಯಾಯ ವೃತ್ತಿಗೆ ತಿಲಾಂಜಲಿಯಿತ್ತು ವಕೀಲಿ ವೃತ್ತಿಯನ್ನು ಕೈಗೊಂಡರು. ವಕೀಲಿ ವೃತ್ತಿಯನ್ನು ಬೆಂಗಳೂರಿನಲ್ಲಿ ನಡೆಸುತ್ತಿದ್ದರು. ಎಂದಿನಂತೆ ಒಂದು ದಿನ ರಾಘವೇಂದ್ರರಾಯರು ಚಿಕ್ಕಪೇಟೆಯಲ್ಲಿ ನಡೆದು ಹೋಗುತ್ತಿದ್ದರು. ಎರಡು ಕುದುರೆಗಳನ್ನು ಕಟ್ಟಿದ್ದ ವಾಹನವೊಂದು ಹಠಾತ್ತನೆ ಇವರ ಸಮೀಪಕ್ಕೆ ಬಂದು ನಿಂತಿತು ಪ್ರಜ್ವಲಿಸುವ ಕಣ್ಣುಗಳುಳ್ಳ ತೆಳುವಾದ ಒಬ್ಬ ವ್ಯಕ್ತಿ

ಅಚ್ಚುಕಟ್ಟಾಗಿ ವಿದೇಶೀ ಪದ್ಧತಿಯ ಉಡುಪು ಧರಿಸಿ ಗಾಡಿಯಿಂದ ಇಳಿದು ಬಂದು ಇವರ ಎದುರಿನಲ್ಲಿ ನಿಂತು ನಮ್ರತೆಯಿಂದ ಶ್ರೀ ರಾಘವೇಂದ್ರರಾಯರನ್ನು ನಮಸ್ಕರಿಸಿದನು. ತನಗೆ ಇಷ್ಟು ಮರ್ಯಾದೆ ತೋರುವ ಈ ಮಹಾನುಭಾವನಾರು ಎಂದು ರಾಘವೇಂದ್ರರಾಯರು ಚಕಿತರಾಗಿ ಆ ವ್ಯಕ್ತಿಯನ್ನು ದಿಟ್ಟಿಸಿ ನೋಡಿದರು. ಮುಂಬೈ ಸರಕಾರದಲ್ಲಿ ಉನ್ನತ ಇಂಜಿನಿಯರ್ ಪದವಿಯನ್ನಲಂಕರಿಸಿದ್ದ ತನ್ನ ಹಳೆಯ ವಿದ್ಯಾರ್ಥಿ ವಿಶ್ವೇಶ್ವರನೇ ಇವನು ಎಂದು ಗುರುತಿಸಲು ಅವರಿಗೆ ಬಹಳ ಕಾಲ ಬೇಕಾಗಲಿಲ್ಲ.

ವಿಶ್ವೇಶ್ವರಯ್ಯನವರು ತಮ್ಮ ವ್ಯಾಸಂಗವನ್ನು ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಮುಗಿಸಿ, ೧೮೮೧ ರಲ್ಲಿ ತಮ್ಮ ಇಪ್ಪತ್ತನೇ ವಯಸ್ಸಿನಲ್ಲಿ ಬಿ.ಎ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ಇವರ ವಿದ್ಯಾ ಸಾಮರ್ಥ್ಯವನ್ನು ನೋಡಿ ದಿವಾನ್ ರಂಗಾಚಾರ್ಲು ಅವರು, ಇವರಿಗೆ ವಿಶೇಷ ವೇತನ ಕೊಟ್ಟು ಇಂಜಿನಿಯರಿಂಗ್ ವ್ಯಾಸಂಗಕ್ಕಾಗಿ ಪೂನಾಗೆ ಕಳುಹಿಸಿಕೊಟ್ಟರು. ಅಲ್ಲಿ 'ಸೈನ್ಸ್' ಕಾಲೇಜಿನಲ್ಲಿ ಸೇರಿ, ಎರಡು ವರುಷಗಳಲ್ಲಿಯೇ ತಮ್ಮ ವಿದ್ಯಾಭ್ಯಾಸ ಮುಗಿಸಿ, ೧೮೮೩ ರಲ್ಲಿ ಪ್ರಥಮಶ್ರೇಣಿಯಲ್ಲಿ ಅಗ್ರಸ್ಥಾನ ಪಡೆದು ಈಗಿನ ಬಿ.ಇ. ಗೆ ಸಮನಾದ ಎಲ್.ಸಿ.ಇ. ಮತ್ತು ಎಫ್.ಸಿ.ಇ. ಎಂಬ ಬೊಂಬಾಯಿ ವಿಶ್ವವಿದ್ಯಾಲಯದ ಪದವಿಗಳನ್ನು ಗಳಿಸಿದರು. ಶ್ರೇಷ್ಠ ತರಗತಿಯಲ್ಲಿ ಉತ್ತೀರ್ಣರಾದುದರಿಂದ 'ಬರ್ಕ್ಲೀ' ಬಹುಮಾನವೂ ದೊರೆಯಿತು.

ಸೆಂಟ್ರಲ್ ಕಾಲೇಜಿನ ಗಣಿತ ಶಾಸ್ತ್ರ ಅಧ್ಯಾಪಕರಾಗಿದ್ದ ಛಾರ್ಲೆಸ್ ವಾಟರ್ಸ್ ಅವರಿಗೆ ವಿಶ್ವೇಶ್ವರಯ್ಯನವರ ಮೇಲೆ ತುಂಬಾ ಪ್ರೀತಿ. ಮುಂದೆ ತನ್ನ ಬುದ್ಧಿ ಶಕ್ತಿಯಿಂದ ವಿಶೇಷ ಖ್ಯಾತಿಗಳಿಸುವುದರಲ್ಲಿ ಸಂದೇಹವಿಲ್ಲವೆಂದು ವಾಟರ್ಸ್ ಆಗಲೇ ಮನಗಂಡಿದ್ದರು. ಗುರುಗಳ ಆಶೋತ್ತರವನ್ನು ಶಿಷ್ಯ ಮೀರಿಸಿ, ಜಗದ್ವಿಖ್ಯಾತನಾದ. ನಿವೃತ್ತರಾದ ಮೇಲೆ ವಾಟರ್ಸ್ ತಮ್ಮ ಸ್ವದೇಶಕ್ಕೆ ಹಿಂತಿರುಗಿದರು. ೨೬ ವರುಷಗಳ ನಂತರ ವಿಶ್ವೇಶ್ವರಯ್ಯನವರು ಇಂಗ್ಲೆಂಡಿಗೆ ಹೋಗಿದ್ದಾಗ, ತಮ್ಮ ಉಪಾಧ್ಯಾಯರನ್ನು ನೋಡಿ ಗುರು

ಭಕ್ತಿಯ ಕಾಣಿಕೆಯನ್ನರ್ಪಿಸುವ ಸುಯೋಗ ಅವರಿಗೆ ದೊರೆಯಿತು. ಆಜೀವ ಪರ್ಯಂತರ ತಮ್ಮ ಗುರುಗಳೊಡನೆ ವಿಶ್ವೇಶ್ವರಯ್ಯನವರು ಪತ್ರ ವ್ಯವಹಾರ ನಡೆಸುತ್ತಿದ್ದರು. ಸಾಯುವುದಕ್ಕೆ ಮೊದಲು ತಾವು ಬಳಸುತ್ತಿದ್ದ ಷರಟಿನ ಚಿನ್ನದ ಗುಂಡಿಗಳನ್ನು ತಮ್ಮ ಶಿಷ್ಯನಿಗೆ ನೆನಪಿಗಾಗಿ ಕೊಡುವಂತೆ ತಿಳಿಸಿದರು. ಭಾರತಕ್ಕೆ ಬಂದಿದ್ದಾಗ ವಾಟರ್ಸ್ ಅವರ ಪತ್ನಿ ವಿಶ್ವೇಶ್ವರಯ್ಯನವರಿಗೆ ಆ ಗುಂಡಿಗಳನ್ನು ತಂದೊಪ್ಪಿಸಿದರು.

ತಮ್ಮ ವಿಶ್ವವಿದ್ಯಾನಿಲಯದಲ್ಲಿ ಪ್ರಥಮ ಸ್ಥಾನ ಪಡೆದವರಿಗೆ ಬೊಂಬಾಯಿ ಸರಕಾರದಲ್ಲಿ ಆಗ ಒಂದು ಉದ್ಯೋಗ ಮೀಸಲಾಗಿರುತ್ತಿತ್ತು. ಪ್ರತಿಭಾವಂತರಾದ ವಿಶ್ವೇಶ್ವರಯ್ಯನವರಿಗೆ ಸಹಜವಾಗಿಯೇ ಈ ಮೀಸಲು ಸ್ಥಾನ ದೊರೆಯಿತು. ೧೮೮೪ ರಲ್ಲಿ ಪ್ರಥಮತಃ ಸರಕಾರಿ ನೌಕರರಾಗಿ ಕ್ಷಣಮಾತ್ರವೂ ದುರ್ವಿನಿಯೋಗವಾಗದ ನಿರಂತರ ಸೇವಾ ಜೀವನ ಪಥದಲ್ಲಿ ವಿಶ್ವೇಶ್ವರಯ್ಯನವರು ಮೊದಲ ಹೆಜ್ಜೆಯಿಟ್ಟರು.

# ಪ್ರಾರಂಭ ಜೀವನ

ಸರಕಾರಿ ನೌಕರಿ ದೊರೆಯಿತೆಂದರೆ ತಮ್ಮ ಸಾರ್ವಜನಿಕ ಜೀವನ, ವೈಯಕ್ತಿಕ ಸ್ವಾತಂತ್ರ್ಯ ಕೊನೆಗಂಡಿತೆಂದೇ ಅನೇಕರು ಭಾವಿಸುತ್ತಾರೆ ತಮ್ಮ ಜೀವನ ಸರ್ವಸ್ವವನ್ನೂ ಸರಕಾರಕ್ಕೆ ಮಾರಿಕೊಂಡು ಬಿಟ್ಟಿದಾಗಿ ಮರುಗುವುದೂವುಂಟು. ಆದರೆ, ಇದಕ್ಕೆ ವ್ಯತಿರಿಕ್ತವಾಗಿ ವಿಶ್ವೇಶ್ವರಯ್ಯನವರ ಸಾರ್ವಜನಿಕ ಸೇವಾ ಜೀವನ ಅವರು ಸರಕಾರಿ ಉದ್ಯೋಗಕ್ಕೆ ಸೇರಿದಂದಿನಿಂದ ಮೊದಲಾಯಿತು ಎಂದರೆ ತಪ್ಪಾಗದು. ಸರಕಾರಿ ನೌಕರರಾದ ಮಾತ್ರಕ್ಕೇ ಅವರು ತಮ್ಮ ವ್ಯಕ್ತಿಸ್ವಾತಂತ್ರ್ಯವನ್ನು ಕಳೆದುಕೊಳ್ಳಲಿಲ್ಲ ಮೇಲಧಿಕಾರಿಗಳಿಗೆ ವಿಧೇಯರಾಗಿ ವರ್ತಿಸುತ್ತಿದ್ದರೂ ಭಿನ್ನಾಭಿಪ್ರಾಯ ಅನಿವಾರ್ಯವಾದಾಗ, ತಮ್ಮ ಅಭಿಪ್ರಾಯವೇ ಸರಿ ಎಂದು ಅವರು ಮನಗಂಡಾಗ, ಅದನ್ನು ನಿರ್ದಾಕ್ಷಿಣ್ಯವಾಗಿ ನಿರ್ಭಯವಾಗಿ ಮೇಲಧಿಕಾರಿಗಳಿಗೆ ತಿಳಿಸಲು ಅವರು ಹಿಂಜರಿಯುತ್ತಿರಲಿಲ್ಲ ತಾವು ಉನ್ನತ ಪದವಿಗಳಿಗೆ ಏರಿದ ಮೇಲೆ ತಮ್ಮ ಕೈ ಕೆಳಗಿನ ನೌಕರರು ನಿರ್ಭಯವಾಗಿ ತಮ್ಮ ಅಭಿಪ್ರಾಯಗಳನ್ನು ತಿಳಿಸಲು ಇವರು ಪ್ರೋತ್ಸಾಹನೀಡುತ್ತಿದ್ದರು. ಇಂಥ ನಿದರ್ಶನಗಳು ಅನೇಕ, ಅವರ ಜೀವನದಲ್ಲಿ

ವಿಶ್ವೇಶ್ವರಯ್ಯನವರ ಸರಕಾರಿ ನೌಕರಿಯ ಜೀವನ ಅವರ ೨೩ನೆ ವಯಸ್ಸಿನಲ್ಲಿ ಬೊಂಬಾಯಿ ಪ್ರಾಂತಕ್ಕೆ ಸೇರಿದ ನಾಸಿಕ್ ಜಿಲ್ಲೆಯಲ್ಲಿ ಮೊದಲಾಯಿತು. ಮರಾಮತ್ ಇಲಾಖೆಯ ಅಸಿಸ್ಟೆಂಟ್ ಇಂಜಿನಿಯರ್ ರಾಗಿ ಮೊದಲು ಅವರ ನೇಮಕವಾಯಿತು. ಅವರ ಸೌಕರ್ಯಕ್ಕೆ ಬೇಕಾದ ಅನುಕೂಲಗಳನ್ನು ಒದಗಿಸಿ ಕೊಡುವಂತೆ ಮಹಾರಾಷ್ಟ್ರದ ಪ್ರಮುಖನಾಯಕರಾದ ಶ್ರೀ ಮಹದೇವ ಗೋವಿಂದರಾನಡೆಯವರು ತಮ್ಮ ಸ್ನೇಹಿತರಿಗೆ ಕಾಗದ ಬರೆದು ವಿಶ್ವೇಶ್ವರಯ್ಯನವರಿಗೆ ಕೊಟ್ಟಿದ್ದರು. ಸಣ್ಣ ವಯಸ್ಸಿನಲ್ಲಿಯೇ ದೊಡ್ಡವರ ಮೆಚ್ಚುಗೆಗೆ ವಿಶ್ವೇಶ್ವರಯ್ಯನವರು ಯಾವರೀತಿ ಪಾತ್ರರಾಗಿದ್ದರೆಂಬುದಕ್ಕೆ ಇದು ಮೊದಲ ನಿದರ್ಶನ.

ನಾಸಿಕ್ ಜಿಲ್ಲೆಯಲ್ಲಿ ಅವರು ಬಹಳ ಕಾಲವಿರಲಿಲ್ಲ. ಅಲ್ಲಿಂದ ಬೇಗನೆ ಖಾನ್‌ದೇಶ ಜಿಲ್ಲೆಗೆ ವರ್ಗವಾಯಿತು. ಅಲ್ಲಿ ಒಬ್ಬ ಆಂಗ್ಲ ಅಧಿಕಾರಿಯ ಬಳಿ ತಮ್ಮ ಇಲಾಖೆಯ ದಿನಚರಿ ಕೆಲಸಗಳನ್ನು ಮಾಡುವ ವಿವರಗಳನ್ನು ಕಲಿತರು. ಆ ಮೇಲೆ ಮತ್ತೆ ನಾಸಿಕ್ ಜಿಲ್ಲೆಗೆ ವರ್ಗವಾಗಿ ಅಲ್ಲಿನ ಒಂದು ಸಣ್ಣ ಕಚೇರಿಯ ಮೇಲ್ವಿಚಾರಣೆ ಅವರಿಗೆ ಒಪ್ಪಿಸಲ್ಪಟ್ಟಿತು. ಅಣೆಕಟ್ಟು, ನಾಲೆಗಳನ್ನು ದುರಸ್ತಿನಲ್ಲಿಡುವುದು, ತಮ್ಮ ಕೈಕೆಳಗಿನ ಉದ್ಯೋಗಿಗಳು ತೂಬು, ನಾಲೆಗಳನ್ನು ಸರಿಯಾದ ಸ್ಥಿತಿಯಲ್ಲಿಡುವಂತೆ ಮೇಲ್ವಿಚಾರಣೆ ನಡೆಸುವುದು ಅವರ ಕೆಲಸ.

ಇನ್ನೂ ನೀರಾವರಿ ಇಲಾಖೆಯ ಕೆಲಸ ಕಾರ್ಯಗಳನ್ನು ಕಲಿಯುತ್ತಿದ್ದ ತರುಣದಲ್ಲಿಯೇ ಮೇಲಧಿಕಾರಿಗಳು ಪಂಜ್ರಾ ನದಿಯಿಂದ ದತಾರಿ ಎಂಬ ಹಳ್ಳಿಗೆ ' ಸೈಫನ್ ' ಕೊಳವೆ ಹಾಕಿ ಅದರ ಮೂಲಕ ನೀರು ಹಾಯಿಸುವ ಗುರುತರವಾದ ಕೆಲಸವನ್ನು ಅವರಿಗೆ ವಹಿಸಿದರು.

ಈ ಕೆಲಸದ ಅನುಭವವನ್ನು ವಿಶ್ವೇಶ್ವರಯ್ಯನವರು ತಮ್ಮ ಆತ್ಮ ಕಥೆಯಲ್ಲಿ ಬಹಳ ಸ್ವಾರಸ್ಯವಾಗಿ ಬಣ್ಣಿಸಿದ್ದಾರೆ. " ಮಳೆಗಾಲಕ್ಕೆ ಸ್ವಲ್ಪ ಮುಂಚೆ ನಾನು ಗೊತ್ತಾದ ಸ್ಥಳಕ್ಕೆ ಹೋದೆ. ಕೆಲಸಕ್ಕೆ ಬೇಕಾದ ಕೊಳವೆಗಳನ್ನು ನನ್ನ ಹಿಂದಿನ ಅಧಿಕಾರಿಗಳೇ ತರಿಸಿ ಸಿದ್ಧವಾಗಿಟ್ಟಿದ್ದರು. ನದೀ ಪಾತ್ರದಲ್ಲಿ ಕೊಳವೆಯ ಒಂದು ಮುಖವನ್ನಿರಿಸಲು ಮರಳನ್ನು ತೆಗೆಸಿ ಕೊಳವೆಯು ಹಾದು ಹೋಗಲು ಸಮೀಪದಲ್ಲಿದ್ದ ಬಂಡೆಗಳನ್ನು ಕೊರೆದು ದಾರಿ ಮಾಡಬೇಕಾಗಿದ್ದಿತು. ಈ ಸುರಂಗದದಾರಿ ಮಾಡುವ ಕೆಲಸ ಪ್ರಾರಂಭಿಸಿದ ಸ್ವಲ್ಪ ದಿನಗಳಲ್ಲಿಯೇ ಮಳೆ ಪ್ರಾರಂಭವಾಯಿತು. ಮಳೆಯ ದೆಸೆಯಿಂದ ನದಿಯಲ್ಲಿ ಪ್ರವಾಹ ಹೆಚ್ಚಿ, ತೋಡುತ್ತಿದ್ದ ನಾಲೆ ಮರಳಿಂದ ತುಂಬಿಹೋಗುತ್ತಿತ್ತು. ಮರಳನ್ನು ತೆಗೆಸದೆ ಕೆಲಸವನ್ನು ಮುಂಬರಿಸಲು ಸಾಧ್ಯವಾಗುತ್ತಿರಲಿಲ್ಲ. ಇದರಿಂದ ಶ್ರಮವೂ ಹೆಚ್ಚು, ವೆಚ್ಚವೂ ಅಧಿಕ. ಈ ಕೆಲಸಕ್ಕೆ ನಾನಿನ್ನೂ ಹೊಸಬನಾದ್ದರಿಂದ ಏನು ಮಾಡಬೇಕೆಂದು ಅಲ್ಲಿನ ಸಬ್ ಡಿವಿಜನ್ ಆಫೀಸರರ ಸಲಹೆ ಕೇಳಿದೆ. ಮಳೆಗಾಲದಲ್ಲಿ ಈ ಕೆಲಸವನ್ನು ಮುಗಿಸುವ ಪ್ರಯತ್ನ ಮಾಡುವುದರಿಂದ ಶ್ರಮವೂ ವೆಚ್ಚವೂ

ಬಹಳ ಅಧಿಕವಾಗುತ್ತದೆ ಆದ್ದರಿಂದ, ತಾತ್ಕಾಲಿಕವಾಗಿ ಈ ಕೆಲಸವನ್ನು ನಿಲ್ಲಿಸಿ, ಮಳೆಗಾಲ ಕಳೆದ ಮೇಲೆ ಮತ್ತೆ ಪ್ರಾರಂಭಿಸುವುದಾಗಿ ಜಿಲ್ಲಾ ಎಕ್ಸಿಕ್ಯುಟಿವ್ ಇಂಜಿನಿಯರಿಗೆ ಬರೆಯುವಂತೆ ಅವರು ತಿಳಿಸಿದರು. ಅವರ ಸಲಹೆಯಂತೆ ಮೇಲಧಿಕಾರಿಗೆ ನಾನು ಕಾಗದ ಬರೆದು, ಧೂಲಿಯಾಕ್ಕೆ ಹಿಂತಿರುಗಲು ಅಪ್ಪಣೆ ಬೇಡಿದೆ."

ಇದಕ್ಕೆ ದೊರೆತ ಉತ್ತರ ಅನಿರೀಕ್ಷಿತವಾಗಿದ್ದಿತು. "ಆಜ್ಞಾಪಾಲನೆ. ಕಾರ್ಯನಿರ್ವಹಣೆ ಇವುಗಳ ವಿಷಯದಲ್ಲಿ ಅ|| ಇಂಜಿನಿಯರು ಪ್ರಾರಂಭದಲ್ಲಿಯೇ ಈ ತಪ್ಪುದಾರಿ ಹಿಡಿದು ನಡೆಯುತ್ತಿರುವುದು ಶುಭ ಸೂಚಕವಲ್ಲ" ಎಂಬ ಕಠಿಣ ಉತ್ತರ ನೋಡಿ ವಿಶ್ವೇಶ್ವರಯ್ಯನವರ ಕಾರ್ಯೋತ್ಸಾಹ ಕುಗ್ಗಿಹೋಯಿತು. "ಕೆಲಸವನ್ನು ಮುಂಬರಿಸದೆ ಕೂಡಲೇ ಮುಗಿಸಬೇಕೆಂಬುದೇ ತಮ್ಮ ಆಜ್ಞೆಯಾಗಿರುವುದರಿಂದ, ಅನಿರೀಕ್ಷಿತವಾದ ಎಡರುತೊಡರುಗಳು ಬಾರದಿದ್ದಲ್ಲಿ, ಈ ಕೆಲಸವನ್ನು ಮುಗಿಸಿಯೇ ನನ್ನ ಕ್ಷೇತ್ರಕ್ಕೆ ಹಿಂತಿರುಗುವೆನು. ಸಾಧ್ಯವಾದ ಮಟ್ಟಿಗೆ ಮಿತವ್ಯಯದಿಂದಲೇ ಕೆಲಸ ಸಾಗಿಸುವೆನು. ಆದರೆ ಅಸಾಧಾರಣ ಸಂದರ್ಭದಲ್ಲಿ ಅಂದಾಜಿಗಿಂತ ಹೆಚ್ಚಿನ ವೆಚ್ಚವಾದರೆ ಅದನ್ನು ಗಮನಿಸಬಾರದು" ಎಂದು ಉತ್ತರ ಬರೆದು ಕೆಲಸವನ್ನು ಮುಂದುವರಿಸಿದರು. ಎರಡು ತಿಂಗಳಲ್ಲಿ ಸ್ಥಳದ ಗಾರೆ ಕೆಲಸಗಾರರು, ಕಲ್ಲುಕುಟಿಗರು, ಹಿಂದುಳಿದ ಭಿಲ್ಲರು ಇವರ ಸಹಾಯ ಮತ್ತು ವಿಶೇಷ ಶ್ರಮದಿಂದ ಕೆಲಸವನ್ನು ಮುಗಿಸಿ, ಕೊಳವೆಯ ಮೂಲಕ ನದಿಯಿಂದ ಆಚೆಯ ಕಾಲುವೆಗೆ ನೀರು ಸತತವಾಗಿ ಹರಿಯುವಂತೆ ಸೈಫನ್ ವ್ಯವಸ್ಥೆಯನ್ನು ಸಮರ್ಪಕವಾಗಿ ಮಾಡಿ, ಅಧಿಕಾರಿಗಳ ವಿಶ್ವಾಸಗಳಿಸಿದರು. ಇಂದಿಗೂ ಅದೇ ಕೊಳವೆಯ ಮೂಲಕ ನೀರು ಹಾಯುತ್ತಿದೆ; ನೂರಾರು ಎಕರೆ ಭೂಮಿ ಸಾಗುವಳಿ ಆಗುತ್ತಿದೆ.

ಪಂಜ್ರಾ ನದಿಯ ಈ ಸೈಫನ್ ಕೆಲಸ ನಡೆಯುತ್ತಿದ್ದಾಗ ಇಂಜಿನಿಯರಾದ ವಿಶ್ವೇಶ್ವರಯ್ಯನವರು ಪ್ರತಿದಿನವೂ ತಾವು ಇಳಿದುಕೊಂಡಿದ್ದ ಬಂಗಲೆಯಿಂದ ಕುದುರೆಯ ಮೇಲೇರಿ ಕೆಲಸದ ಸ್ಥಳಕ್ಕೆ ಹೋಗುತ್ತಿದ್ದರು. ಈ ಬಂಗಲೆಗೂ ಕೆಲಸ ನಡೆಯುತ್ತಿದ್ದ ಸ್ಥಳಕ್ಕೂ ಸುಮಾರು ಎರಡೂವರೆ ಮೈಲಿ.

ಒಂದು ದಿನ ದೊಡ್ಡ ಮಳೆ ಬಂದು ನದಿಯಲ್ಲಿ ನೀರು ತುಂಬಿ ಹೊಳೆ ದಾಟು ವುದು ದುಸ್ತರವಾಯಿತು. ಸಮೀಪದ ನಂದವನ ಎಂಬ ಹಳ್ಳಿಯಲ್ಲಿ ರಾತ್ರಿಯನ್ನು ಕಳೆಯಬೇಕಾಯಿತು. ಎರಡನೆಯ ದಿನ ದತ್ತಾತ್ರಿಯಲ್ಲಿ ಉಳಿಯಬೇಕಾಯಿತು. ಈ ದತ್ತಾತ್ರಿ ಗ್ರಾಮದ ನಿವಾಸಿಗಳಿಗಾಗಿಯೇ ಈ 'ಸೈಫನ್' ಏರ್ಪಾಟು ನಡೆಯುತ್ತಿದ್ದುದು. ವಿಶ್ವೇಶ್ವರಯ್ಯನವರು ತಮ್ಮಲ್ಲಿ ಉಳಿದುಕೊಳ್ಳುತ್ತಾರೆಂದು ತಿಳಿದ ಆ ಗ್ರಾಮಸ್ಥರ ಸಂತೋಷಕ್ಕೆ ಪಾರವೇ ಇರಲಿಲ್ಲ. ಗ್ರಾಮಸ್ಥರೆಲ್ಲರೂ ಅವರ ಬಳಿಗೆ ಬಂದು ತಮ್ಮ ಆತಿಥ್ಯವನ್ನು ಸ್ವೀಕರಿಸಬೇಕೆಂದು ಆಹ್ವಾನಿಸಿದರು. ಯಾವ ಕಷ್ಟವನ್ನೂ ಲೆಕ್ಕಿಸದೆ ಸಕಾಲದಲ್ಲಿ ಕೆಲಸವನ್ನು ಮುಗಿಸಬೇಕೆಂದು ಮಳೆಗಾಲದಲ್ಲಿಯೂ ಕೂಡ ತರುಣ ಇಂಜಿನಿಯರಾದ ವಿಶ್ವೇಶ್ವರಯ್ಯ ಪಡುತ್ತಿದ್ದ ಕಷ್ಟವನ್ನು ಅವರೆಲ್ಲರೂ ಮನಗಂಡಿದ್ದರು. ಅವರು ಒಂದು ರಾತ್ರಿ ದತ್ತಾತ್ರಿಯಲ್ಲಿ ಉಳಿದು ಗ್ರಾಮಸ್ಥರ ಅಭಿಲಾಷೆಯನ್ನು ತೃಪ್ತಿಗೊಳಿಸಿದರು. ಭಿಲ್ಲರು ಕಟ್ಟಿದ್ದ ತೆಪ್ಪಗಳ ಸಹಾಯದಿಂದ ಹೊಳೆಯನ್ನು ಈಸಿಕೊಂಡು ಮೂರನೆಯ ದಿನ ವಿಶ್ವೇಶ್ವರಯ್ಯನವರು ತಮ್ಮ ಬಿಡಾರಕ್ಕೆ ಹಿಂತಿರುಗಿದರು. ಅವರ ಕುದುರೆಯನ್ನು ಕೆಲಸಗಾರರು ದಡಕ್ಕೆ ಹಾಯಿಸಿದರು.

'ಸೈಫನ್' ಕೆಲಸವನ್ನು ಸಕಾಲದಲ್ಲಿ ಮುಗಿಸಿದ್ದರಿಂದ ವಿಶ್ವೇಶ್ವರಯ್ಯನವರು ತಮ್ಮ ಮೇಲಧಿಕಾರಿಗಳ ಮೆಚ್ಚುಗೆ ಪಡೆದರು. ಮೊದಲು ಈ ವಿಚಾರದಲ್ಲಿ ಆಕ್ಷೇಪಯುತ ಪತ್ರ ಬರೆದಿದ್ದ ಎಕ್ಸಿಕ್ಯೂಟಿವ್ ಇಂಜಿನಿಯರೂ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿ ಕಾಗದ ಬರೆದರು. ಉತ್ತಮ ಕೆಲಸಕ್ಕೆ ಪುರಸ್ಕಾರ ಯಾವಾಗಲೂ ಉಂಟು.

ಸರಕಾರಿ ನೌಕರಿಗೆ ಸೇರಿದ ಇಂಜಿನಿಯರುಗಳು ಇಲಾಖೆಯ ಕೆಲವು ಪರೀಕ್ಷೆಗಳಲ್ಲಿ ಉತ್ತೀರ್ಣರಾದರೆ ಮಾತ್ರ ಬಡತಿ ಪಡೆಯಲು ಅವರಿಗೆ ಅವಕಾಶವಿತ್ತು. ಐರೋಪ್ಯರಾಗಲಿ ಭಾರತೀಯರಾಗಲಿ, ಈ ಪರೀಕ್ಷೆಗೆ ಕೂಡ ಬೇಕಾಗಿತ್ತು ಅದರಲ್ಲಿ ಒಂದು ಪ್ರಶ್ನಪತ್ರಿಕೆ ಇಂಜಿನಿಯರ್ ಕಸಬಿನಲ್ಲಿ ಪ್ರತ್ಯಕ್ಷ ಅನುಭವವನ್ನು ಕುರಿತದ್ದು. ಇನ್ನೊಂದು ಪ್ರಾಂತ ಭಾಷೆಯ ಪರಿಶ್ರಮದ್ದು. ಮೈಸೂರಿನಿಂದ ವಿದ್ಯಾರ್ಜನೆಗಾಗಿ ಅನೇಕ ವಿದ್ಯಾರ್ಥಿಗಳು

ಪೂನಾ, ಬೊಂಬಾಯಿಗಳಿಗೆ ಹೋಗುತ್ತಾರೆ. ಅನೇಕ ವರುಷ ಅಲ್ಲಿ ನೆಲಸಿದರೂ ಜನರ ಸಂಪರ್ಕ ಬೆಳಸಿಕೊಳ್ಳದೆ ಅಲ್ಲಿಯ ದೇಶಭಾಷೆಯನ್ನು ಕಲಿಯುವುದೇ ಇಲ್ಲ. ಆದರೆ ಇಷ್ಟು ವೇಳೆಗೆ ವಿಶ್ವೇಶ್ವರಯ್ಯನವರು ಮರಾಠಿ ಭಾಷೆಯನ್ನು ಚೆನ್ನಾಗಿ ಅಭ್ಯಾಸಮಾಡಿದ್ದರು. ಇದರಲ್ಲಿ ತೇರ್ಗಡೆಯಾಗುವ ವಿಚಾರದಲ್ಲಿ ಅವರಿಗೆ ಯಾವ ಸಂದೇಹವೂ ಇರಲಿಲ್ಲ. ಆದರೆ ಪ್ರತ್ಯಕ್ಷಾನುಭವದ ಇಂಜಿನಿಯರಿಂಗ್ ವಿಭಾಗದಲ್ಲಿ ತಾನು ತೇರ್ಗಡೆಯಾಗುವೆನೇ ಎಂಬ ಸಂಶಯ ಅವರಲ್ಲಿ ಮೂಡಿತ್ತು. ಪರೀಕ್ಷೆಯಲ್ಲಿ ತೇರ್ಗಡೆಯಾಗಲು ಎರಡು ಮೂರು ವರುಷಗಳ ಅನುಭವವಾದರೂ ಅವಶ್ಯಕವಾಗಿತ್ತು. ಅವರು ಉದ್ಯೋಗಕ್ಕೆ ಬಂದು ಇನ್ನೂ ಒಂದು ವರುಷ ಕೂಡ ಆಗಿರಲಿಲ್ಲ. ಆದರೆ ಇವರ ಪ್ರತಿಭೆಯನ್ನು ತಿಳಿದಿದ್ದ ಪಾಲಿಸರ್ ಎಂಬ ಆಂಗ್ಲ ಮೇಲಧಿಕಾರಿಯು, ಈ ಸೋಲಿನ ಮನೋಭಾವವನ್ನು ಜರಿದು, ಪರೀಕ್ಷೆಗೆ ಕೂಡುವಂತೆ ವಿಶ್ವೇಶ್ವರಯ್ಯನವರನ್ನು ಒತ್ತಾಯಮಾಡಿದರು. ವಿಶ್ವೇಶ್ವರಯ್ಯನವರು ಅದರಲ್ಲಿ ತೇರ್ಗಡೆ ಹೊಂದಿದರೆಂದು ಹೇಳಬೇಕಾದ್ದೇ ಇಲ್ಲ. ಜಯದೊಂದಿಗೆ ಬಡ್ತಿಯೂ ದೊರೆಯಿತು. ಹೀಗೆ ನೌಕರಿಗೆ ಸೇರಿದ ಇಪ್ಪತ್ತೇ ತಿಂಗಳಲ್ಲಿ ಮೊದಲನೆಯ ದರ್ಜೆಯ ಇಂಜಿನಿಯರ್ ಅಧಿಕಾರಕ್ಕೆ ಏರಿ ತಿಂಗಳಿಗೆ ರೂ. ೫೦೦ ಗಳ ವೇತನ ಪಡೆದರು.

ಖಾನ್‌ದೇಶದಲ್ಲಿ ಮಲೇರಿಯ ಹಾವಳಿ ಅಧಿಕ. ವಿಶ್ವೇಶ್ವರಯ್ಯನವರು ಜ್ವರಪೀಡಿತರಾದರು. ದೇಹಾರೋಗ್ಯವನ್ನು ಕಾಪಾಡಿಕೊಳ್ಳುವ ಉದ್ದೇಶದಿಂದ ಬೇರೆ ಎಲ್ಲಿಗಾದರೂ ವರ್ಗಮಾಡಬೇಕೆಂದು ಮೇಲಧಿಕಾರಿಗಳಿಗೆ ಬರೆದುಕೊಂಡರು. ಕೂಡಲೆ ಅವರನ್ನು ಪುಣೆಗೆ ಎಕ್ಸಿಕ್ಯುಟಿವ್ ಇಂಜಿನಿಯರ್ ಕೈಕೆಳಗೆ ಕೆಲಸಮಾಡಲು ವರ್ಗಾಯಿಸಲಾಯಿತು. ಇದುವರೆಗೂ ನೀರಾವರಿ ಯೋಜನೆಗಳಲ್ಲಿ ಕೆಲಸಮಾಡುತ್ತಿದ್ದ ವಿಶ್ವೇಶ್ವರಯ್ಯನವರಿಗೆ ಕಟ್ಟಡಗಳು, ರಸ್ತೆಗಳು ಇವುಗಳ ಮೇಲ್ವಿಚಾರಣೆ, ದುರಸ್ತಿ ಇವುಗಳನ್ನು ನೋಡಿಕೊಳ್ಳುವ ವಿಭಾಗಕ್ಕೆ ವರ್ಗವಾಯಿತು. ಇದರಿಂದ ಇಂಜಿನಿಯರಿಂಗ್ ಶಾಖೆಯ ಈ ವಿಭಾಗದಲ್ಲೂ ಅನುಭವ ಪಡೆಯುವ ಅವಕಾಶ ದೊರೆತಂತಾಯಿತು. "ನನಗೆ ಈ ವಿಭಾಗದಲ್ಲಿ ಸಾಕಷ್ಟು ಅನುಭವವಿಲ್ಲ. ಈ ಕೆಲಸ ನನಗೆ ಬೇಡ" ಎಂದು ಅವರು ಮೂದಲಿಸಲಿಲ್ಲ. ಹೊಸಶಾಖೆ

ಗಳಲ್ಲಿ ಅನುಭವ ಪಡೆಯುವ ಅವಕಾಶ ದೊರೆಯಿತಲ್ಲ ಎಂದು ಸಂತೋಷ ದಿಂದ ಉತ್ಸಾಹದಿಂದ ಕೆಲಸ ಮಾಡಿ ಮೇಲಧಿಕಾರಿಗಳ ಮನ್ನಣೆಗೆ, ಗೌರವಕ್ಕೆ ಪಾತ್ರರಾದರು.

ಆದರೆ ವಿಶ್ವೇಶ್ವರಯ್ಯನವರು ನಿಜವಾಗಿ ಖ್ಯಾತಿಗಳಿಸಿದ್ದುದು ನೀರಾವರಿ ಕೆಲಸಗಳಲ್ಲೇ ಈ ಖ್ಯಾತಿಯ ಪರಿಣಾಮವಾಗಿ ಸಿಂಧ್ ಪ್ರಾಂತ್ಯದ ಸಕ್ಕೂರ್ ಎಂಬ ಪಟ್ಟಣದಲ್ಲಿ ತಮ್ಮ ಪ್ರತಿಭೆಯನ್ನು ಪ್ರದರ್ಶಿಸುವ ಅವಕಾಶ ಇವರಿಗೆ ದೊರೆಯಿತು.

ಸಕ್ಕೂರಿಗೆ ಸಿಂಧ್ ನದಿಯಿಂದ ಕುಡಿಯುವ ನೀರನ್ನು ಒದಗಿಸಬೇಕಾಗಿತ್ತು. ಇದಕ್ಕಾಗಿ ನೇಮಿತನಾಗಿದ್ದ ಒಬ್ಬ ಆಂಗ್ಲ ಇಂಜಿನಿಯರ್ ಹಠಾತ್ತನೆ ತೀರಿಹೋದನು. ಆತನ ಸ್ಥಾನವನ್ನು ತೆಗೆದುಕೊಳ್ಳುವುದಕ್ಕೆ ವಿಶ್ವೇಶ್ವರಯ್ಯನವರಿಗೆ ಕರೆ ಬಂದಿತು. ಸಿಂಧ್ ಆಗಿನ ಕಾಲಕ್ಕೆ ಇನ್ನೂ ಪ್ರತ್ಯೇಕ ಪ್ರಾಂತವಾಗಿರಲಿಲ್ಲ; ಬೊಂಬಾಯಿ ಪ್ರಾಂತಕ್ಕೇ ಸೇರಿದ್ದಿತು. ವಿಶ್ವೇಶ್ವರಯ್ಯನವರ ಸಾಮರ್ಥ್ಯವನ್ನು ಅರಿತಿದ್ದ ಅವರ ಮೇಲಧಿಕಾರಿಯು ಅವರೇ ಆ ಕೆಲಸವನ್ನು ನಿರ್ವಹಿಸಲು ಯೋಗ್ಯರೆಂದು ನಿರ್ಧರಿಸಿ, "ಆ ಕೆಲಸವನ್ನು ಕೈಗೊಳ್ಳುವಿರಾ" ಎಂದು ಅವರನ್ನು ಕೇಳಿದನು. ಸಕ್ಕೂರ್ ಪಟ್ಟಣದ ಗಾಳಿ ಅಷ್ಟೇನೂ ಉತ್ತಮವಾಗಿರಲಿಲ್ಲ ವಿಶೇಷ ಛಳಿ, ಅತಿಯಾದ ಬಿಸಿಲು ಪಟ್ಟಣ ಇನ್ನೂ ಅಭಿವೃದ್ಧಿಗೆ ಬಂದಿರಲಿಲ್ಲ. ಇಂಥಾ ಅನಾರೋಗ್ಯದ ಪ್ರದೇಶಕ್ಕೆ ಹೋಗಲು ಅಧಿಕಾರಿಗಳು ಹಿಂಜರಿಯುತ್ತಿದ್ದರು. ಸಾಲದುದಕ್ಕೆ ಆಗತಾನೆ ಹಠಾತ್ತನೆ ಆಂಗ್ಲ ಇಂಜಿನಿಯರ್ ತೀರಿಹೋಗಿದ್ದ. ಅಧಿಕಾರಿಗಳನ್ನು ಅಲ್ಲಿಗೆ ಹೋಗುವಂತೆ ಪ್ರೇರೇಪಿಸಲು ತಿಂಗಳಿಗೆ ರೂ. ೨೦೦ ಗಳ ಹೆಚ್ಚು ಸಂಬಳ, ಮನೆ ಬಾಡಿಗೆಗೆ ಪ್ರತ್ಯೇಕ ರೂ ೫೦ ಕೊಡುವುದಾಗಿ ಸರಕಾರ ತಿಳಿಸಿತು ಇದೂ ಅನೇಕರಿಗೆ ಸಾಕಷ್ಟು ಪ್ರೋತ್ಸಾಹಕರವಾಗಿ ತೋರುತ್ತಿರಲಿಲ್ಲ ಆದರೆ ವಿಶ್ವೇಶ್ವರಯ್ಯನವರ ಮೇಲಧಿಕಾರಿಯಾದ ರೇನಾಲ್ಡ್ ಬರೆದಂತೆ-" ಈ ಕೆಲಸದಿಂದ ನಿಮಗೆ ಉತ್ತಮ ಅನುಭವ, ಜ್ಞಾನ ಸಂಪಾದನೆ ಆಗಿ ನಿಮ್ಮ ಪುರೋಭಿವೃದ್ಧಿಗೂ ಖ್ಯಾತಿಗೂ ಸಹಾಯವಾಗಬಹುದು"— ಎಂಬ ಪ್ರೋತ್ಸಾಹಕರವಾದ ಮಾತುಗಳು ಈ ಕೆಲಸವನ್ನು ಒಪ್ಪಿಕೊಳ್ಳುವಂತೆ ಅವರನ್ನು ಪ್ರೇರೇಪಿಸಿತು.

ಸಕ್ಕ್ಯಾರಿಗೆ ಸಿಂಧೂ ನದಿಯಿಂದ ನೀರನ್ನು ಸರಪರಾಜು ಮಾಡ ಬೇಕಾಗಿತ್ತು. ನದಿಯಿಂದ ಸಮೀಪದ ಗುಡ್ಡಕ್ಕೆ ನೀರನ್ನು 'ಪಂಪ್' ಮಾಡಿ, ಎತ್ತಿ, ಅಲ್ಲಿ ಅದನ್ನು ಶೋಧಿಸಿ, ಶುದ್ಧಿ ಮಾಡಿ ನಳಗಳ ಮೂಲಕ ಊರಿಗೆ ಹಾಯಿಸಬೇಕೆಂದು ಮೊದಲು ಯೋಜನೆ ಮಾಡಲಾಗಿತ್ತು. ಸಿಂಧೂ ನದಿಯ ನೀರು ಸದಾ ಬಗ್ಗಡ. ಇದನ್ನು ಶೋಧಿಸಿ ಶುಚಿಗೊಳಿಸಿ, ಕುಡಿಯಲು ಯೋಗ್ಯವಾಗಿ ಮಾಡುವುದಕ್ಕೆ ವೆಚ್ಚ ಹೆಚ್ಚು. ಸಕ್ಕ್ಯಾರ್ ಪೌರಸಭೆಯು ಈ ಹಣವನ್ನು ಒದಗಿಸುವುದು ಕಷ್ಟವಾಗಿತ್ತು. ವಿಶ್ವೇಶ್ವರಯ್ಯ ನವರು ಧೈರ್ಯ ಮಾಡಿ ತಮ್ಮದೇ ಆದ ಹೊಸದೊಂದು ಯೋಜನೆಯನ್ನು ಸಿದ್ಧಗೊಳಿಸಿದರು. ನದಿಯ ಸಮೀಪದಲ್ಲಿಯೇ ದೊಡ್ಡ ಬಾವಿ ತೋಡಿ, ನದಿಯ ಬಗ್ಗಡ ನೀರು ಬಾವಿಯ ಕೆಳಭಾಗದ ಸುರಂಗದಿಂದ ಮರಳಿನ ಮೂಲಕ ಮೇಲೇರಿ ಬರುವಂತೆ ಮಾಡುವುದೇ ಈ ಯೋಜನೆ. ಇದರಿಂದ ನೀರನ್ನು ಶುದ್ಧಿ ಮಾಡಲು ಪ್ರತ್ಯೇಕ 'ಫಿಲ್ಟರ್' ಕಟ್ಟುವುದು ಅನವಶ್ಯಕ ವಾಯಿತು. ಈ ಭಾಗಕ್ಕೆ ತಗಲುವ ವೆಚ್ಚ ಉಳಿಯಿತು. ಕೆಲಸವೂ ಬೇಗ ಮುಗಿಯಿತು.

ರೇನಾಲ್ಡ್ ಅವರ ಮಾತು ನಿಜವಾಯಿತು. ಇದುವರೆಗೂ ಇತರರ ಅಧೀನದಲ್ಲಿ ಕೆಲಸಮಾಡುತ್ತಿದ್ದ ವಿಶ್ವೇಶ್ವರಯ್ಯನವರಿಗೆ ಸ್ವತಂತ್ರಿಸಿ ಕೆಲಸಮಾಡುವ ಮುಖ್ಯಾಧಿಕಾರ ಮತ್ತು ಅವಕಾಶ ದೊರೆಯಿತು. ತಮ್ಮ ಬುದ್ಧಿಸಾಮರ್ಥ್ಯ, ಕಲಾಕೌಶಲ್ಯ, ಧೈರ್ಯಸಾಹಸಗಳಿಂದ ಅನೇಕ ವರುಷ ಹಿಡಿಯಬಹುದುದೆಂದು ನಿರೀಕ್ಷಿಸಲಾಗಿದ್ದ ಕೆಲಸವನ್ನು ಕೇವಲ ಒಂದೂವರೆ ವರುಷದಲ್ಲಿ, ಅದನ್ನೂ ಬಹು ಸುಲಭ ವೆಚ್ಚದಲ್ಲಿ, ಮುಗಿಸಿ ಬೊಂಬಾಯಿ ಗವರ್ನರ್ ಆದಿಯಾಗಿ ಎಲ್ಲ ಉನ್ನತ ಅಧಿಕಾರಿಗಳ ಮತ್ತು ಜನರ ಪ್ರಶಂಸೆಗೂ, ಪ್ರೀತಿಗೂ ಪಾತ್ರರಾದರು.

ಈ ಅನುಭವದಿಂದ ಗುಜರಾತಿನ ಸೂರತ್ ನಗರಕ್ಕೆ ನೀರೊದಗಿಸುವ ಇಂಥದೇ ಮತ್ತೊಂದು ಯೋಜನೆಯನ್ನು ಕಾರ್ಯರೂಪಗೊಳಿಸುವ ಅವಕಾಶ ವಿಶ್ವೇಶ್ವರಯ್ಯನವರಿಗೆ ದೊರೆಯಿತು.

---

# ನೀರಾವರಿಯಲ್ಲಿ ನವೀನ ಕ್ರಮ

ಸೂರತ್ ಜಿಲ್ಲೆಯಲ್ಲಿ ಸುಮಾರು ಒಂದು ವರುಷ ಕೆಲಸ ಮಾಡಿದ ಮೇಲೆ ೧೮೯೫ ರಲ್ಲಿ ಪೂನಾ ಜಿಲ್ಲೆಗೆ ವರ್ಗವಾಯಿತು. ಬಡ್ತಿಯೂ ದೊರೆಯಿತು. ಬೊಂಬಾಯಿ ಪ್ರಾಂತದಲ್ಲಿ ಸಿಂಧ್ ಜಿಲ್ಲೆಯನ್ನು ಬಿಟ್ಟರೆ ಅತ್ಯಂತ ಮುಖ್ಯವಾದ ವ್ಯವಸಾಯದ ಜಿಲ್ಲೆ ಪೂನಾ. ಇಡೀ ಪ್ರಾಂತದಲ್ಲೇ ಅತ್ಯಂತ ದೊಡ್ಡದಾದ ಎರಡು ಜಲಾಶಯಗಳು ಈ ಜಿಲ್ಲೆಯಲ್ಲಿವೆ. ನಾಲೆಯ ಸಹಾಯದಿಂದ ಇಲ್ಲಿ ವಿಶೇಷ ಸಾಗುವಳಿ ನಡೆಯುತ್ತದೆ. ಇಂಥ ವಿಭಾಗಕ್ಕೆ ವಿಶ್ವೇಶ್ವರಯ್ಯನವರು ಜಿಲ್ಲೆಯ ಮುಖ್ಯ ಇಂಜಿನಿಯರಾಗಿ ನೇಮಿತರಾದರು.

ಜಿಲ್ಲಾ ಇಂಜಿನಿಯರಾಗಿ ಕೆಲಸ ವಹಿಸಿಕೊಂಡ ಸ್ವಲ್ಪ ದಿನಗಳಲ್ಲೆ ಜಟಿಲ ಸಮಸ್ಯೆಯೊಂದನ್ನು ಇವರು ಎದುರಿಸಬೇಕಾಯಿತು. ಪೂನಾದ ಸುತ್ತಮುತ್ತಲಿದ್ದ ಜಮೀನಿಗೆ ಕಾಲುವೆಯಿಂದ ನೀರು ಸರಬರಾಜು ಆಗುತ್ತಿತ್ತು. ನೀರು ಬಹಳವಾಗಿ ದುರ್ವಿನಿಯೋಗವಾಗುತ್ತಿದ್ದುದು ಮಾತ್ರವಲ್ಲದೆ, ಎಲ್ಲಾ ಗದ್ದೆಗಳಿಗೂ ಯಥೇಚ್ಛವಾಗಿ ಒದಗಿಸುವಷ್ಟು ಇರಲಿಲ್ಲ. ಆದ್ದರಿಂದ ಹತ್ತು ದಿನಗಳಿಗೊಂದು ಬಾರಿ ಸರದಿಯ ಪ್ರಕಾರ ನೀರು ಬಿಡುವ ಕ್ರಮವನ್ನು ಜಾರಿಗೆ ತರಲಾಯಿತು. ಇಚ್ಛಾನುಸಾರವಾಗಿ ಬಳಸುತ್ತಾ, ನೀರನ್ನು ವಿಶೇಷವಾಗಿ ಪೋಲು ಮಾಡುತ್ತಿದ್ದ ರೈತರಿಗೆ ಈ 'ರೇಷ್ಟ' ಪದ್ಧತಿ ಸರಿಬೀಳಲಿಲ್ಲ. ಅವರು ಈ ಪದ್ಧತಿಯನ್ನು ಪ್ರತಿಭಟಿಸ ತೊಡಗಿದರು. ವಿಖ್ಯಾತರಾದ ಲೋಕಮಾನ್ಯ ತಿಲಕರ 'ಕೇಸರಿ' ಪತ್ರಿಕೆಯಲ್ಲಿ ಈ ಪದ್ಧತಿಯನ್ನು ಟೀಕಿಸಿ ಅನೇಕ ಲೇಖನಗಳು ಬರತೊಡಗಿದವು.

ಆದರೆ ವಿಶ್ವೇಶ್ವರಯ್ಯನವರು ಧೈರ್ಯಗುಂದಲಿಲ್ಲ. ಈ ಲೇಖನಗಳೆಲ್ಲವನ್ನೂ ಸಂಗ್ರಹಿಸಿ ಬೊಂಬಾಯಿ ಸರಕಾರಕ್ಕೆ ಕಳುಹಿಸಿ, ಅವರಿಂದ ಸಲಹೆಯನ್ನು ಅಪೇಕ್ಷಿಸಿದರು. ಅಲ್ಲದೆ, ಪೂನಾದಲ್ಲಿಯೆ ವಾಸವಾಗಿದ್ದ ಅನೇಕ ಶ್ರೀಮಂತರೂ ಮಾತುಭಾರಿಯಾದ ಗಣ್ಯ ವ್ಯಕ್ತಿಗಳೂ ಈ ಜಮೀನುಗಳ ಒಡೆಯರಾಗಿದ್ದುದರಿಂದ ಹೆಚ್ಚು ಗಲಾಟೆಗೆ ಕಾರಣವಾಗಿತ್ತು. "ತಮ್ಮಲ್ಲಿ

ನಮಗೆ ಪೂರ್ಣ ವಿಶ್ವಾಸವಿದೆ; ಸೂಕ್ತ ತೋರಿದಂತೆ ವರ್ತಿಸಲು ತಮಗೆ ಅಧಿಕಾರ ಕೊಡಲಾಗಿದೆ" ಎಂದು ಬೊಂಬಾಯಿ ಸರಕಾರ ವಿಶ್ವೇಶ್ವರಯ್ಯನವರಿಗೆ ಉತ್ತರ ಬರೆದು ಅವರಲ್ಲಿ ತನಗಿರುವ ವಿಶ್ವಾಸವನ್ನು ವ್ಯಕ್ತಪಡಿಸಿತು.

ಹೀಗೆ ಸಾಕಷ್ಟು ಅಧಿಕಾರವಡೆದರೂ ವಿಶ್ವೇಶ್ವರಯ್ಯನವರು ದರ್ಪದಿಂದ ವರ್ತಿಸಲಿಲ್ಲ ಅದಕ್ಕೆ ಪ್ರತಿಯಾಗಿ ಜನರನ್ನು ಒಲಿಸಿಕೊಂಡು ಅವರ ಪ್ರೀತಿ ವಿಶ್ವಾಸಗಳಿಸುವ ಪ್ರಯತ್ನವನ್ನು ಕೈಗೊಂಡರು. ರೈತರ ಮತ್ತು ಮಾಲೀಕರ ಸಭೆಯನ್ನು ಕರೆಸಿ, ನೀರಾವರಿಗೆ ಸೇರಿದ ಅಧಿಕಾರಿಗಳನ್ನೂ ಬರಮಾಡಿಕೊಂಡು, ನೀರು ಹಂಚಿಕೆಯ ಯೋಜನೆಯನ್ನು ವಿಸ್ತಾರವಾಗಿ ಎಲ್ಲರಿಗೂ ತಿಳಿಸಿದರು. ಭೂಗುಣ, ಬೆಳೆ, ನೀರಿನ ಆವಶ್ಯಕತೆ, ಇವೆಲ್ಲವನ್ನೂ ಗಮನಿಸಿ, ಯಾರಿಗೂ ಅನ್ಯಾಯವಾಗದಂತೆಯೂ ನೀರು ಪೋಲಾಗದಂತೆಯೂ ಅಳೆದು ಕ್ಲುಪ್ತ ಪ್ರಮಾಣದಲ್ಲಿ ಕೊಡುವುದಾಗಿ ಭರವಸೆಯಿತ್ತರು. ನೀರುಗಂಟಿಯನ್ನೂ ಸಹ ರೈತರೇ ನೇಮಿಸಿಕೊಳ್ಳಬಹುದೆಂದೂ, ಸರಕಾರ ಅವನ ಸಂಬಳವನ್ನು ಭರಿಸುವುದಾಗಿಯೂ ಸಹ ತಿಳಿಸಿದರು. ರೈತರಿಗೆ ಇದರಿಂದ ಈ ಯೋಜನೆಯಲ್ಲಿ ಪೂರ್ಣ ವಿಶ್ವಾಸ ಮೂಡಿತು ವಿಶ್ವೇಶ್ವರಯ್ಯನವರು ಜನರ ಪ್ರೀತಿ ವಿಶ್ವಾಸಗಳಿಸಿ ಈ ಯೋಜನೆಯು ಯಶಸ್ವಿಯಾಗುವಂತೆ ಮಾಡಿದರು. ವಿಶ್ವೇಶ್ವರಯ್ಯನವರು ಕೇವಲ ಉತ್ತಮ ಇಂಜಿನಿಯರ್ ಮಾತ್ರವಲ್ಲ, ಲೋಕ ವ್ಯವಹಾರ ಕುಶಲರೂ ಹೌದು ಎಂದು ಇದರಿಂದ ಸ್ಪಷ್ಟ ಪಡಿಸಿದರು.

ಇದೇ ಸಂದರ್ಭದಲ್ಲಿ ಭಾರತದ ನೀರಾವರಿ ಬೇಸಾಯವನ್ನು ಅಭಿವೃದ್ಧಿಗೊಳಿಸಲು ಸೂಕ್ತ ಸಲಹೆಗಳನ್ನು ಮಾಡುವುದಕ್ಕಾಗಿ ಭಾರತ ಸರಕಾರವು ಗಣ್ಯರ ಒಂದು ಯೋಜನಾ ಸಮಿತಿಯನ್ನು ಗೊತ್ತು ಮಾಡಿತು. ಈ ಸಮಿತಿಗೆ ಅವರ ಪ್ರಾರ್ಥನೆಯಂತೆ ವಿಶ್ವೇಶ್ವರಯ್ಯನವರು 'ಬ್ಲಾಕ್ ಸಿಸ್ಟಂ' ಎಂಬ ಯೋಜನೆ ಒಂದನ್ನು ಮೂರು ತಿಂಗಳ ಅವಧಿಯಲ್ಲಿ ಸಿದ್ಧಪಡಿಸಿ ಒಪ್ಪಿಸಿದರು. ಅವರು ಪೂನಾದಲ್ಲಿ ನಡೆಸಿ ಯಶಸ್ಸು ಪಡೆದ ಪದ್ಧತಿಯ ಶಾಸ್ತ್ರೀಯ ವಿಸ್ತಾರ ಇದು.

ಈ ಯೋಜನೆಯಂತೆ ಅಚ್ಚುಕಟ್ಟಿನ ಇಡೀ ಜಮೀನನ್ನು ಮೂರು ಸಮ ಭಾಗಗಳಾಗಿ ವಿಂಗಡಿಸಲಾಗುವುದು. ಮೂರು ಸಾವಿರ ಎಕರೆ ಜಮೀನಿದ್ದರೆ

ಸಾವಿರ ಎಕರೆಗೆ ಒಂದು ಬ್ಲಾಕ್‌ನಂತೆ ಮೂರು ಬ್ಲಾಕ್ ಅಥವ ವಿಭಾಗಗಳು. ಒಂದು ಭಾಗದಲ್ಲಿ ಬಹಳ ಹೆಚ್ಚು ನೀರು ಅಪೇಕ್ಷಿಸುವ ಕಬ್ಬು ಮತ್ತು ಭತ್ತದ ಬೆಳೆ; ಮತ್ತೊಂದು ವಿಭಾಗದಲ್ಲಿ ಅಷ್ಟು ಹೆಚ್ಚು ನೀರು ಬೇಡದ ವಾರಕ್ಕೆ ಒಂದು ಅಥವ ಎರಡಾವರ್ತಿ ನೀರು ಬಿಟ್ಟರೂ ಬೆಳೆಯಾಗುವ ಫಸಲನ್ನು ಬೆಳೆಯುವ ವಿಭಾಗ; ಮತ್ತೊಂದು ತರೀ ಫಸಲಿನ ಜಮೀನು ಸರದಿಯಂತೆ ಬೆಳೆಯನ್ನು ಅದಲು ಬದಲು ಮಾಡಲಾಗುವುದು ಹೀಗಾಗುವುದರಿಂದ ಹಳ್ಳಿಯ ಎಲ್ಲ ಜಮೀನಿಗೂ ಸಾಕಷ್ಟು ನೀರು ದೊರೆಯುವುದು ಮಾತ್ರವಲ್ಲದೆ ಜಮೀನೂ ಹೆಚ್ಚು ಪ್ರಯೋಜನಕ್ಕೆ ಬರುತ್ತದೆ. ಭೂಸಾರವೂ ಕೆಡುವುದಿಲ್ಲ; ಮಲೇರಿಯಾ ಹಾವಳಿಯೂ ಕಡಮೆಯಾಗುತ್ತದೆ. ರೈತರಿಗೆ ಹೆಚ್ಚು ಉತ್ಪತ್ತಿ, ಒಳ್ಳೆಯ ಆರೋಗ್ಯ; ಸರಕಾರಕ್ಕೂ ಅಧಿಕ ವರಮಾನ. ಈ ಯೋಜನೆಯು ಭಾರತದಿಂದ ನೇಮಿತವಾದ ವ್ಯವಸಾಯ ಮಂಡಲಿಯ ಪ್ರಶಂಸೆಗೆ ಪಾತ್ರವಾಯಿತೆಂದು ಹೇಳಬೇಕಾದ್ದೇ ಇಲ್ಲ.

ಈ ಯೋಜನೆಯನ್ನು ಕಾರ್ಯಗತ ಮಾಡುವ ಹೊಣೆಯನ್ನು ಬೊಂಬಾಯಿ ಸರಕಾರವು ವಿಶ್ವೇಶ್ವರಯ್ಯನವರಿಗೇ ಒಪ್ಪಿಸಿತು. ನೀರಾ ನದಿ ಕಾಲುವೆಯ ಕೆಳಗೆ ಈ ಪ್ರಯೋಗವನ್ನು ವಿಶ್ವೇಶ್ವರಯ್ಯನವರು ಕೈಗೊಂಡರು. ಇದನ್ನು ಕಾರ್ಯರೂಪಕ್ಕೆ ತರುವುದರಲ್ಲಿ ಅನೇಕ ತೊಡಕುಗಳನ್ನು ಅವರು ಎದುರಿಸಬೇಕಾಯಿತು. ಜಿಲ್ಲೆಯ ಆಂಗ್ಲ ಅಧಿಕಾರಿಗಳಾದ ಕಲೆಕ್ಟರ್ ಮತ್ತು ಅಸಿಸ್ಟೆಂಟ್ ಕಲೆಕ್ಟರ್ ಇದಕ್ಕೆ ಸಹಕಾರ ನೀಡಲಿಲ್ಲ. ರೈತರೂ ಮುಂದೆ ಬರಲಿಲ್ಲ ಆದರೆ ತಮ್ಮ ವ್ಯವಹಾರ ಸಾಮರ್ಥ್ಯದಿಂದ ಇವೆಲ್ಲವನ್ನೂ ವಿಶ್ವೇಶ್ವರಯ್ಯನವರು ಸರಿಪಡಿಸಿಕೊಂಡು ಯೋಜನೆಯನ್ನು ಯಶಸ್ವಿಗೊಳಿಸಿದರು.

"ಈ ಯೋಜನೆಯು ಫಲಪ್ರದವಾಗಲು ವಿಶ್ವೇಶ್ವರಯ್ಯನವರ ಬುದ್ಧಿ ಸಾಮರ್ಥ್ಯವೇ ಮುಖ್ಯಕಾರಣ. ಬೊಂಬಾಯಿ ಸರಕಾರದ ಮರಾಮತ್ ಇಲಾಖೆಯಲ್ಲಿ ಇಷ್ಟು ಪ್ರತಿಭಾವಂತನಾದ ಆಂಗ್ಲೇಯನಾಗಲಿ, ಭಾರತೀಯನಾಗಲಿ— ದಕ್ಷನಾದ ಅಧಿಕಾರಿ ಮತ್ತೊಬ್ಬನನ್ನು ಕಂಡರಿಯೆ" ಎಂದು ಬೊಂಬಾಯಿ ಸರಕಾರದ ಮಂತ್ರಿಮಂಡಲದ ಪ್ರಧಾನ ಸದಸ್ಯರಾದ ಸರ್ ಜಾರ್ಜ್ ಮೆಕನ್ಜಿಯವರಿಂದ ವಿಶ್ವೇಶ್ವರಯ್ಯನವರು ೧೯೦೮ ರಲ್ಲಿ ಪ್ರಶಂಸೆ ಪಡೆದರು.

---

# ನವ ನಿರ್ಮಾಣ

ಪೂನಾಕ್ಕೆ ದಂಡಿನ ವಿಭಾಗವಾದ ಕರ್ಕಿ ಪ್ರದೇಶಗಳಿಗೆ ಕುಡಿಯುವ ನೀರನ್ನು ಒದಗಿಸುವ ಶಾಖೆಯೂ ವಿಶ್ವೇಶ್ವರಯ್ಯನವರ ಇಲಾಖೆಯ ಅಧೀನದಲ್ಲೇ ಇದ್ದಿತು ಮೂಸಾನದಿಯ ಕಾಲುವೆಯಿಂದ ಪೂನಾ, ಕರ್ಕಿ ನಗರಗಳಿಗೆ ನೀರನ್ನು ಒದಗಿಸುತ್ತಿದ್ದರು. ಕರ್ಕಿ ಭಾಗಕ್ಕೆ ಶೋಧಿಸಲ್ಪಟ್ಟ ಒಳ್ಳೆಯ ನೀರೂ, ಪೂನಾ ನಗರ ವಿಭಾಗಕ್ಕೆ ಶೋಧಿಸಲ್ಪಡದ ಕಾಲುವೆಯ ನೀರೂ ನೇರವಾಗಿ ನಳಗಳಿಂದ ಹಾಗೇ ಸರಬರಾಜು ಆಗುತ್ತಿತ್ತು. ಖಡಕವಾಸಲ್ ಎಂಬ ಊರಿನ ಸಮೀಪದಲ್ಲಿದ್ದ ಫೈಫ್ ಸರೋವರದ ನೀರೇ ಪೂನಾ-ಕರ್ಕಿ ನಗರಗಳಿಗೆ ಆಧಾರ. ಆದರೆ ನಗರ ಬೆಳೆದಂತೆ ನೀರು ಸಾಕಾಗದೆ ಹೋಗಬಹುದೆಂಬ ಶಂಕೆ ಅಧಿಕವಾಯಿತು. ಮಳೆಗಾಲದಲ್ಲಿ ಜಲಾಶಯವು ತುಂಬಿ ಕೋಡಿಯ ಮೇಲೆ ಏಳು-ಎಂಟು ಅಡಿಗಳಷ್ಟು ನೀರು ವ್ಯರ್ಥವಾಗಿ ಹರಿದು ಹೋಗುತ್ತಿತ್ತು. ಈ ನೀರನ್ನು ಅಲ್ಲೇ ತಡೆದು ನಿಲ್ಲಿಸಿದರೆ ಸಾಕಷ್ಟು ನೀರು ಒದಗಬಹುದಾಗಿತ್ತು. ವಿಶ್ವೇಶ್ವರಯ್ಯನವರು ತಮ್ಮ ಬುದ್ಧಿ ಸಾಮರ್ಥ್ಯದಿಂದ ಇದಕ್ಕೊಂದು ಸುಲಭ ಉಪಾಯವನ್ನು ಕಂಡು ಹಿಡಿದು, ವಿಶೇಷ ಖ್ಯಾತಿಗಳಿಸಿದರು.

ತಾನಾಗಿಯೇ ಮುಚ್ಚಿ-ತೆರೆಯುವ ಸ್ವಯಂಚಾಲಕ ಬಾಗಿಲು ಈ ಉಪಾಯ. ಈ ಚಮತ್ಕಾರವಾದ ಉಕ್ಕಿನ ಬಾಗಿಲನ್ನು ವಿಶ್ವೇಶ್ವರಯ್ಯನವರೇ ರಚಿಸಿದರು. ಬೊಂಬಾಯಿನ ಒಂದು ಸುಪ್ರಸಿದ್ಧ ಆಂಗ್ಲ ಕಾರ್ಖಾನೆಯಲ್ಲಿ ಈ ಬಾಗಿಲನ್ನು ಮಾಡಿಸಿದರು. ಇಂಡಿಯಾ ಸರಕಾರದ ಒಪ್ಪಿಗೆ ಪಡೆದ ಮೇಲೆಯೇ ಈ ಬಾಗಿಲು ತಯಾರಾದುದು ಇದನ್ನು ತಯಾರಿಸಲು ಬಹಳ ಹಣ ವೆಚ್ಚವಾಯಿತು. ೧೯೦೧ ರಲ್ಲಿ ಈ ಬಾಗಿಲು ತಯಾರಾಗಿ ಫೈಫ್ ಜಲಾಶಯದ ಕೋಡಿಯಲ್ಲಿ ಇದನ್ನು ಇಟ್ಟರು. ಕೋಡಿಯ ಮೇಲೆ ವ್ಯರ್ಥವಾಗಿ ಹರಿದು ಹೋಗುತ್ತಿದ್ದ ಎಂಟು ಅಡಿ ಎತ್ತರದ ನೀರನ್ನು ಈ ಬಾಗಿಲುಗಳು ತಡೆದು ನಿಲ್ಲುಸುತ್ತಿದ್ದುವು.

ಇದರಿಂದ ಜಲಾಶಯಕ್ಕೆ ಕಟ್ಟೆಯನ್ನು ಎತ್ತರಿಸಿದೆಯೆ ಕಾಲು ಭಾಗದಷ್ಟು ಹೆಚ್ಚು ನೀರು ಒದಗಲು ಸಾಧ್ಯವಾಯಿತು ಕೋಡಿಯ ಮೇಲೆ ಎಂಟು ಅಡಿ ಎತ್ತರದವರೆಗಿನ ನೀರನ್ನು ಈ ಬಾಗಿಲುಗಳು ತಡೆದು ನಿಲ್ಲಿಸುತ್ತವೆ. ಎಂಟು ಅಡಿಗೂ ಮೀರಿದ ಪ್ರವಾಹ ಬಂದರೆ ಬಾಗಿಲುಗಳು ತಾವಾಗಿಯೇ ತೆರೆದು ಪ್ರವಾಹದ ಹೆಚ್ಚುವರಿ ನೀರು ಹರಿದು ಹೋಗಲು ದಾರಿ ಕೊಡುತ್ತವೆ. ನೀರಿನ ಮಟ್ಟ ಮತ್ತೆ ಎಂಟು ಅಡಿಗೆ ಇಳಿಯುತ್ತಲೇ ಬಾಗಿಲುಗಳು ಮುಚ್ಚಿಕೊಳ್ಳುತ್ತವೆ ಕಟ್ಟೆಯ ಎತ್ತರವನ್ನು ಹೆಚ್ಚಿಸದೆ ಸುಲಭೋಪಾಯದಿಂದ ನೀರನ್ನು ತಡೆದು ನಿಲ್ಲಿಸುವ ಈ ಜಾಣ್ಮೆಯು ಎಲ್ಲ ಇಂಜನಿಯರುಗಳ ಮತ್ತು ಇಂಡಿಯಾ ಸರಕಾರದ ಮೆಚ್ಚುಗೆಗೆ ಪಾತ್ರವಾಯಿತು. ಈ ಅದ್ಭುತ ಕೌಶಲವನ್ನು ನೋಡಲು ಬೊಂಬಾಯಿ ಪ್ರಾಂತದ ಇಬ್ಬರು ಗವರ್ನರುಗಳೂ, ಆಗ ಭಾರತ ಸೈನ್ಯದ ಮಹಾದಂಡನಾಯಕನಾಗಿದ್ದು ಮುಂದೆ ಇಂಗ್ಲೆಂಡ್-ಜರ್ಮನಿ ಮಹಾಯುದ್ಧದಲ್ಲಿ ಬ್ರಿಟಿಷ್ ಸೈನ್ಯದ ಅಧಿಪತಿಯಾಗಿದ್ದ ಜಲಸಮಾಧಿಸ್ಥರಾದ ಲಾರ್ಡ್ ಕಿಚಿನರ್ ಅವರೂ ದಯಮಾಡಿಸಿದ್ದರು. ಈ ಬಾಗಿಲಿನ 'ಪೇಟೆಂಟ್' ಅಥವ ಕೃತಿಚೌರ್ಯ ರಕ್ಷಣೆಯನ್ನು ವಿಶ್ವೇಶ್ವರಯ್ಯನವರು ಪಡೆದರು. ಈ ಬಾಗಿಲಿನ ರಚನೆಗಾಗಿ ಸರಕಾರದಿಂದ ಸಂಭಾವನೆಯನ್ನು ಪಡೆಯಬಹುದಾಗಿದ್ದರೂ ಅದನ್ನು ವಿಶ್ವೇಶ್ವರಯ್ಯನವರು ಉದಾರ ಬುದ್ಧಿಯಿಂದ ನಿರಾಕರಿಸಿದರು. ಗ್ವಾಲಿಯರಿನ ಟಿಗ್ರಾ ಅಣೆಕಟ್ಟು, ಮೈಸೂರಿನ ಕೃಷ್ಣರಾಜ ಸಾಗರಗಳಲ್ಲಿಯೂ ಇದೇ ಬಗೆಯ ಬಾಗಿಲುಗಳನ್ನು ರಚಿಸಲಾಯಿತು. ೫೦ ವರುಷಗಳಾದರೂ, ಈಗಲೂ ಸಹ ಖಡಕವಾಸಲಿನಲ್ಲಿ ಮೊದಲು ವಿಶ್ವೇಶ್ವರಯ್ಯನವರು ನಿರ್ಮಿಸಿದ ತಾವಾಗಿಯೇ ಮುಚ್ಚಿ-ತೆರೆಯುವ ಬಾಗಿಲುಗಳು ಇಂದಿಗೂ ಸಮರ್ಪಕವಾಗಿ ಕೆಲಸ ಮಾಡುತ್ತಿರುವುದು ಅವರ ಕಲಾ ಕೌಶಲ್ಯಕ್ಕೆ ಸಾಕ್ಷಿಯಾಗಿದೆ.

---

# ಏಡೆ೯ಗೆ ಒಳಚರಂಡಿ ಮತ್ತು ನೀರಿನ ವ್ಯವಸ್ಥೆ

ಒಂದು ಸ್ಥಾನದ ನೀರಾವರಿ ಸಾಗುವಳಿಯನ್ನು ಯಾವರೀತಿ ಹೆಚ್ಚಿಸಬಹುದು ಎಂಬ ವಿಷಯಗಲ್ಲಿ ಸೂಕ್ತ ಸಲಹೆ ಕೊಡಲು ಒಂದು ಯೋಜನಾ ಸಮಿತಿಯನ್ನು ಇಂಡಿಯಾ ಸರಕಾರ ಗೊತ್ತು ಮಾಡಿತು ಎಂದು ಹಿಂದೆಯೇ ತಿಳಿಸಿದೆ. ಈ ಸಮಿತಿಗೆ ಕೇಂದ್ರ ಮತ್ತು ಪ್ರಾಂತ ಸರಕಾರದ ಉನ್ನತ ಅಧಿಕಾರಿಗಳು ಸದಸ್ಯರಾಗಿದ್ದರು. ಈಜಿಪ್ಟಿನ ಮುಖ್ಯ ಇಂಜನಿಯರಾಗಿ ನಿವೃತ್ತರಾಗಿದ್ದ ಸರ್ ಸ್ಕಾಟ್ ಮಾನ್‌ಕ್ರೀಫ್ ಅವರ ಅಧ್ಯಕ್ಷರು. ಬೊಂಬಾಯಿ ಪ್ರಾಂತದ ನೀರಾವರಿ ಬೇಸಾಯವನ್ನು ಅಭಿವೃದ್ಧಿಗೊಳಿಸುವ ಬಗ್ಗೆ, ಈ ಸಮಿತಿಯ ಕೋರಿಕೆಯಂತೆ ವಿಶ್ವೇಶ್ವರಯ್ಯನವರು ಅವರಿಗೆ ದೀರ್ಘವಾದ ತಮ್ಮದೇ ಪ್ರತ್ಯೇಕ ಯೋಜನೆಯೊಂದನ್ನು ಒಪ್ಪಿಸಿದರು. ಕೂಲಂಕಷವಾಗಿ ಅಂಕಿ ಅಂಶಗಳೊಡನೆ ಒಪ್ಪಿಸಲ್ಪಟ್ಟ ಇವರ ಸಲಹೆಗಳು ಭಾರತದ ನೀರಾವರಿ ಸಮಿತಿಯ ಸಂಪೂರ್ಣ ಮೆಚ್ಚುಗೆಗೆ ಪಾತ್ರವಾಯಿತು. ವಿಶ್ವೇಶ್ವರಯ್ಯನವರನ್ನು ಬರಮಾಡಿಕೊಂಡು ಎರಡು-ಮೂರು ದಿನಗಳವರೆಗೆ ಇನ್ನೂ ಹೆಚ್ಚು ವಿವರಗಳನ್ನು ಸಂಗ್ರಹಿಸಲು ಅವರನ್ನು ಪ್ರಶ್ನಿಸಿ ಸಮಿತಿಯವರು ಕಡೆಗೆ "ವಿಶ್ವೇಶ್ವರಯ್ಯನವರನ್ನು ಮೀರಿದ ಇಂಜನಿಯರುಗಳು ಒಬ್ಬರೋ ಇಬ್ಬರೋ ಪ್ರಪಂಚದಲ್ಲಿ ಇದ್ದಾರೆಯೋ ಇಲ್ಲವೋ" ಎಂದು ತಮ್ಮ ವರದಿಯಲ್ಲಿ ಪ್ರಶಂಸಿಸಿ ಬರೆದರು. ಅಮೆರಿಕಾ ದೇಶದ ಅನೇಕ ಕಂಪನಿಗಳು ವಿಶ್ವೇಶ್ವರಯ್ಯನವರ ಸಲಹೆಯನ್ನು ಮನ್ನಿಸಿ ನಡೆಯುವುದಲ್ಲಿ ಆಶ್ಚರ್ಯವೇನು?

ವಿಶ್ವೇಶ್ವರಯ್ಯನವರು ತಮ್ಮ ಸಾಮರ್ಥ್ಯದಿಂದ ಸರಕಾರಿ ಉದ್ಯೋಗದಲ್ಲಿ ಮೇಲಕ್ಕೆ ಮೇಲಕ್ಕೆ ಬಹುಬೇಗನೆ ಏರುತ್ತಾ ಬಂದರು. ಅದುವರೆಗೂ ಭಾರತೀಯರಿಗೆ ಅಲಭ್ಯವಾಗಿದ್ದ ಅನೇಕ ದೊಡ್ಡ ಹುದ್ದೆಗಳು ಮೊಟ್ಟಮೊದಲು ಅವರಿಗೆ ದೊರೆತವು. ಸಿಂಧ್ ಪ್ರದೇಶವನ್ನೊಳಗೊಂಡ ಬೃಹತ್

ಬೊಂಬಾಯಿ ಪ್ರಾಂತಕ್ಕೆ ಅವರು ಸ್ಯಾನಿಟರಿ ಅಥವ ಸಫಾಯಿ ಇಂಜಿನಿಯರಾಗಿ ೧೯೦೪ ರಲ್ಲಿ ನೇಮಿತರಾದರು. ಪೂನಾ ನೀರಾವರಿ ಭಾಗದ ಮುಖ್ಯ ಇಂಜಿನಿಯರಾಗಿಯೂ ಇದ್ದರು. ಕರಾಚಿ, ಅಹಮದಾಬಾದ್ ಮೊದಲಾದ ದೊಡ್ಡದೊಡ್ಡ ನಗರಗಳಲ್ಲದೆ, ಸಣ್ಣ ಸಣ್ಣ ಊರುಗಳಿಗೆ ನೀರು ಒದಗಿಸುವುದು, ಒಳಚರಂಡಿಯ ವ್ಯವಸ್ಥೆ ಇತ್ಯಾದಿ ಅನೇಕ ಕಾರ್ಯಗಳು ಇವರ ನೇತೃತ್ವದಲ್ಲಿ ಈ ಕಾಲದಲ್ಲಿ ನಡೆಯಿತು. ೧೯೦೭ರಲ್ಲಿ ಇವರು ಏಕ ಕಾಲದಲ್ಲಿ ಮೂರು ವಿಭಾಗಗಳ ಮೇಲ್ವಿಚಾರಕರಾಗಿ ಕೆಲಸ ನಡೆಸಿದರು. ಈ ಕಾಲದಲ್ಲಿಯೆ ಧಾರವಾಡ, ಬಿಜಾಪುರಗಳಿಗೆ ಕುಡಿಯುವ ನೀರಿನ ವ್ಯವಸ್ಥೆ ಇವರ ಯಾಜಮಾನ್ಯದಲ್ಲಿ ಪೂರ್ಣವಾಯಿತು ನೀರಾವರಿ ಕೆಲಸಗಳು ಮಾತ್ರವಲ್ಲದೆ ರಸ್ತೆಯನ್ನು ಸುಸ್ಥಿತಿಯಲ್ಲಿಡುವ ಬಗ್ಗೆ ಹೊಸ ನಿಯಮಗಳನ್ನು ಮಾಡಿ, ಇಡೀ ಪ್ರಾಂತದಲ್ಲೇ ಅವನ್ನು ರೂಢಿಗೆ ತಂದರು. ಬೊಂಬಾಯಿ ಪ್ರಾಂತದಲ್ಲಿ ಪೌರಸಭೆಗಳಿಗೆ ಈ ರೀತಿ ಅವರು ಸಲ್ಲಿಸುತ್ತಿದ್ದ ಅಪಾರ ಸೇವೆಯು ಸರಕಾರದ ಗಮನಕ್ಕೆ ಬಾರದೆ ಹೋಗಲಿಲ್ಲ. ಆಗ ಬೊಂಬಾಯಿ ಗವರ್ನರ್ ಆಗಿದ್ದ ಲಾರ್ಡ್ ಸಿಡ್ಲಹ್ಯಾಂ ಅವರು ೧೯೦೮ ರಲ್ಲಿ ಅಹಮದಾಬಾದಿನ ಪೌರಸಭೆಯ ಮಾನ ಪತ್ರವನ್ನು ಸ್ವೀಕರಿಸುತ್ತ- "ನಿಮ್ಮ ಊರಿಗೆ ನೀರಿನ ಸರಬರಾಜು ಸಮರ್ಪಕವಾಗಿರಬೇಕಾದರೆ ಅತ್ಯಂತ ಮೇಧಾವಿಗಳೂ, ಅಪಾರ ಪರಿಶ್ರಮವನ್ನು ಪಡೆದಿರುವವರೂ ಆದ ವಿಶ್ವೇಶ್ವರಯ್ಯನವರ ಸಲಹೆಯನ್ನು ನೀವು ಪಡೆಯುವುದು ಅತ್ಯಗತ್ಯ. ನಿಮಗೆ ಅತ್ಯಂತ ಉಪಯುಕ್ತವಾದ ಸಲಹೆಗಳನ್ನು ಅವರು ನೀಡಬಲ್ಲರೆಂಬುದರಲ್ಲಿ ನನಗೆ ಸಂದೇಹವಿಲ್ಲ" ಎಂದು ಬಹಿರಂಗ ಸಭೆಯಲ್ಲಿ ತಿಳಿಸಿದರು.

ಅವರ ಸಾಮರ್ಥ್ಯವನ್ನು ಮನಗಂಡ ಬೊಂಬಾಯಿ ಸರಕಾರದವರು ಇಂಗ್ಲೆಂಡಿನಲ್ಲಿ ಇಂಡಿಯಾ ದೇಶದ ಕಾರ್ಯದರ್ಶಿಗಳಾದ ಲಾರ್ಡ್ ಮಾರ್ಲೆ ಅವರ ಸೂಚನೆಯಂತೆ, ವಿಶ್ವೇಶ್ವರಯ್ಯನವರನ್ನು ಏಡನ್ ಬಂದರಿನಲ್ಲಿ ನೀರಿನ ವ್ಯವಸ್ಥೆಗೆ ಸೂಕ್ತ ಸಲಹೆ ನೀಡಲು ೧೯೦೭ರಲ್ಲಿ ಗೊತ್ತು ಮಾಡಿದರು. ನಗರದ ನೈರ್ಮಲ್ಯ ರಕ್ಷಣೆಯ ಸಲಹೆಯನ್ನೂ ಮಾಡಬೇಕಾಗಿತ್ತು. ಇದಲ್ಲದೆ ಏಡನ್ನಿನ ರಸ್ತೆಗಳನ್ನು ಯಾವ ಶ್ರೇಣಿಗೆ ಸೇರಿಸಬೇಕು, ಅವುಗಳ

ಸುವ್ಯವಸ್ಥೆಗೆ ಏಡೆ್ನ ದಂಡಿನ ವಿಭಾಗ, ಬೊಂಬಾಯಿ ಸರಕಾರ ಎಷ್ಟೆಷ್ಟು ಸಾಲು ವೆಚ್ಚವನ್ನು ಭರಿಸಬೇಕು ಎಂಬುದನ್ನು ಗೊತ್ತುಮಾಡುವ ಸಮಿತಿಯ ಸದಸ್ಯರಾಗಿಯೂ ಬೊಂಬಾಯಿ ಸರಕಾರದ ಪರವಾಗಿ ವಿಶ್ವೇಶ್ವರಯ್ಯನವರು ನೇಮಿತರಾದರು. ಆಗ ಏಡನ್ನಿನ ಅಸೈನಿಕ ವಿಭಾಗದ ಮೇಲ್ವಿಚಾರಣೆ ಬೊಂಬಾಯಿ ಸರಕಾರಕ್ಕೆ ಸೇರಿತ್ತು.

ಏಡೆ್ನ ಬಹಳ ದೊಡ್ಡ ನಗರವಲ್ಲ. ಮೆಡಿಟರೇನಿಯನ್ ಸಮುದ್ರವನ್ನೂ ಅರಬ್ಬಿ ಸಮುದ್ರವನ್ನೂ ಒಂದುಗೂಡಿಸುವ ಸುಯೆಜ್ ಕಾಲುವೆಯನ್ನು ಭಾರತದ ಕಡೆಯಿಂದ ಪ್ರವೇಶಿಸುವಾಗ ಅದು ಮೊದಲನೆಯ ರೇವುಪಟ್ಟಣ. ತನ್ನ ಈ ವಿಶಿಷ್ಟ ಸ್ಥಾನ ಬಲದಿಂದ ಅದು ಬ್ರಿಟಿಷ್ ಚಕ್ರಾಧಿಪತ್ಯದಲ್ಲಿ ಅತ್ಯಂತ ಪ್ರಾಮುಖ್ಯತೆ ಪಡೆದ ಬಂದರು ಆಗಿದೆ. ಏಡೆ್ನ ಮತ್ತು ಸುಯೆಜ್ ಕಾಲುವೆಯ ರಕ್ಷಣೆಗಾಗಿ ಬ್ರಿಟಿಷರು ತಮ್ಮ ಸೈನ್ಯದ ಪಡೆಗಳನ್ನು ಇಲ್ಲಿ ಸ್ಥಿರವಾಗಿ ಇರಿಸಿರುತ್ತಾರೆ.

ನೀರು ಮಾನವನ ಮುಖ್ಯ ಆವಶ್ಯಕತೆಗಳಲ್ಲೊಂದು. ಮರಳುಗಾಡಿನಿಂದ ಆವೃತವಾದ ಏಡನ್ನಿನಲ್ಲಿ ಕುಡಿಯುವುದಕ್ಕೂ ಸಾಕಷ್ಟು ನೀರಿಲ್ಲ. ಸಮುದ್ರದ ನೀರನ್ನು ಕಾಯಿಸಿ ಆವಿಯಾಗಿ ಮಾಡಿ ಕುಡಿಯುವ ನೀರಾಗಿ ಪರಿವರ್ತಿಸಿ ಅದನ್ನು ಸೈನಿಕರೂ, ವರ್ತಕರೂ ಬಳಸುವರು. ಹೀಗೆ ಸಮುದ್ರದ ನೀರನ್ನು ಕುಡಿಯುವ ನೀರಾಗಿ ಪರಿವರ್ತಿಸುವುದೇ ಅನೇಕ ಕಂಪೆನಿಗಳ ಉದ್ಯಮ. ಅಲ್ಲಿ ದೂರ ಪ್ರದೇಶದಿಂದ ಗಾಡಿಯಲ್ಲಿ ನೀರು ತಂದು ಮಾರಾಟ ಮಾಡುವವರು ಹಲವರು. ಸಮೀಪದ ಕಟ್ಟೆಯಿಂದಲೂ ಸೈನಿಕರಿಗೆ ನೀರು ಒದಗುತ್ತದೆ. ಆದರೆ ಇದು ಉಪ್ಪು ನೀರು. ಕಾಯಿಸಿ ಇಂಗಿಸಿದ ಆ ಸಮುದ್ರದ ನೀರು ೧೦೦ ಗ್ಯಾಲನ್‌ಗಳಿಗೆ ೩ ರೂಪಾಯಿ. ಗಾಡಿಯಲ್ಲಿ ಬರುವ ನೀರಿಗೆ ೧ರಿಂದ ೧ ೮-೦ ದರ. ಸೈನಿಕರೂ ಇತರರೂ ಸೇರಿ ವರುಷಕ್ಕೆ ಸುಮಾರು ೭ ಲಕ್ಷ ರೂಪಾಯಿಗಳನ್ನು ನೀರಿಗಾಗಿಯೇ ವೆಚ್ಚಮಾಡುವರೆಂದು ಲೆಕ್ಕವಾಯಿತು ಈ ಲೆಕ್ಕ ಹಾಕಿದ್ದು ಬೇರೆಯಾರೂ ಅಲ್ಲ, ವಿಶ್ವೇಶ್ವರಯ್ಯನವರೇ.

ಹೀಗೆ ವರ್ಷಂ ಪ್ರತಿ ಇಷ್ಟು ಹಣವನ್ನು ವೆಚ್ಚ ಮಾಡುವುದಕ್ಕಿಂತ ಸ್ಥಿರ ವ್ಯವಸ್ಥೆ ಮಾಡುವುದೇ ಸರಿ ನೀರಿಲ್ಲದೆ ಯಾವ ಪಟ್ಟಣವೂ ಬಾಳ ಲಾರದು, ಬೆಳೆಯಲಾರದು. ವಿಶ್ವೇಶ್ವರಯ್ಯನವರು ಇದಕ್ಕಾಗಿ ಒಂದು ದಾರಿ ತೋರಿಸಿಕೊಟ್ಟರು. ಏಡನ್‌ಗೆ ಸುಮಾರು ೬೦ ಮೈಲಿ ದೂರದಲ್ಲಿ ಗುಡ್ಡಬೆಟ್ಟಗಳ ಪ್ರದೇಶವಿದೆ. ಇಲ್ಲಿ ಮಳೆ ಸುಮಾರು ಮಳೆ ನೀರು ಹಳ್ಳ ವಾಗಿ ಹೊಳೆಯಾಗಿ ಸ್ವಲ್ಪದೂರ ಹರಿಯುತ್ತದೆ. ಆದರೆ ಮುಂದೆ ಹಾಗೇ ಪ್ರವಹಿಸಿ ಸಮುದ್ರವನ್ನು ಸೇರದೆ ಲಹೆಜ್ ಬಳಿ ಮರಳಿನಲ್ಲಿಯೇ ಮಾಯ ವಾಗಿ ಬಿಡುತ್ತದೆ ಮರಳಿನಲ್ಲಿ ಕಣ್ಮರೆಯಾಗಿ ಹೋಗುವ ಈ ಪ್ರದೇಶ ದಲ್ಲಿ ಬಾವಿಯನ್ನು ತೋಡಿ ನೀರನ್ನು ಸಂಗ್ರಹಿಸಿ, ೧೮ ಮೈಲಿ ದೂರದ ಲಹೇಜ್‌ನಿಂದ ನಳಗಳ ಮೂಲಕ ಏಡನ್ನಿಗೆ ನೀರು ಸರಬರಾಜು ಮಾಡ ಬಹುದೆಂದು ವಿಶ್ವೇಶ್ವರಯ್ಯನವರು ಸೂಚಿಸಿದರು

ಏಡನ್‌ಗೆ ನೀರು ಒದಗಿಸುವುದು ಮಾತ್ರವಲ್ಲದೆ ಒಳ ಚರಂಡಿ ವ್ಯವಸ್ಥೆಯ ಯೋಜನೆಯನ್ನು ಸಿದ್ಧಪಡಿಸುವದನ್ನೂ ವಿಶ್ವೇಶ್ವರಯ್ಯನವರಿಗೆ ವಹಿಸಲಾ ಗಿತ್ತು. ಈ ವರದಿಯನ್ನು ಒಪ್ಪಿಸುವ ಮೊದಲು ಏಡನ್ ಮತ್ತು ಅದರ ಸುತ್ತುಮುತ್ತಲ ಪ್ರದೇಶಗಳಾದ ತವಾಹಿ, ಷೇಕ್ ಒಟ್ಮೋರ್ಮನ್ ಇವುಗಳ ಪ್ರಜಾ ಬಾಹುಳ್ಯ, ಜನನ–ಮರಣ ಸಂಖ್ಯೆ ಇವುಗಳನ್ನು ಸಂಗ್ರಹಿಸಿ, ಪಾಶ್ಚಿ ಮಾತ್ಯ ದೇಶಗಳೊಡನೆ ಹೋಲಿಸಿ, ಭೂಮ್ಯಂತರ್ಗತ ಚರಂಡಿ ವ್ಯವಸ್ಥೆಯ ಅವಶ್ಯಕತೆಯನ್ನು ಅಂಕಿಅಂಶಗಳಿಂದ ಸಮರ್ಥಿಸಿ ಸ್ಥಿರಪಡಿಸಿದರು. ಒಳ ಚರಂಡಿ ವ್ಯವಸ್ಥೆಗೂ ಜನನ-ಮರಣಕ್ಕೂ ಇಂಜಿನಿಯರ್ ಮಾಡಬೇಕಾದ ಕೆಲಸಕ್ಕೂ ಏನು ಬಾದರಾಯಣ ಸಂಬಂಧ ಎಂದು ಕೇಳಬಹುದು ಷೇಕ್ ಒಟ್ಮೋರ್ಮನ್‌ನಲ್ಲಿ ಸಾವಿರ ಪ್ರಜಾ ಸಂಖ್ಯೆಗೆ ಸರಾಸರಿ ಮರಣ ೧೨೨; ಇಂಗ್ಲೆಂಡ್ ಮತ್ತು ವೇಲ್ಸ್‌ನಲ್ಲಿ ೧೦೦೦ಕ್ಕೆ ೧೮; ಬೊಂಬಾಯಿನಲ್ಲಿ ೪೦. ಒಳ ಚರಂಡಿ ವ್ಯವಸ್ಥೆಯನ್ನು ಏರ್ಪಡಿಸುವುದರಿಂದ ಸಾರ್ವಜನಿಕ ಆರೋ ಗ್ಯವು ಅಭಿವೃದ್ಧಿ ಹೊಂದಿ ಮರಣ ಸಂಖ್ಯೆ ಇಳಿಯುತ್ತದೆ ಎಂಬುದಕ್ಕೆ ಈ ಸಂಖ್ಯೆಗಳ ಅವಶ್ಯಕತೆ. ಅಂಕಿ-ಸಂಖ್ಯೆಗಳೆಂದರೆ ಅದೊಂದು ಹುಚ್ಚು ವಿಶ್ವೇಶ್ವರಯ್ಯನವರಿಗೆ. ಮಾತುಮಾತಿಗೂ ನಮ್ಮ ವಾದಕ್ಕೆ ಆಧಾರವೇನು

ಎನ್ನುವುದು ಅವರ ಸ್ವಭಾವ. ಆಧಾರವಿಲ್ಲದೆ ಅವರಿಗೆ ಮಾತು ಮುಂಬರಿಯದು. ಅಂಕಿ-ಸಂಖ್ಯೆಗಳ ಅವರ ಹುಚ್ಚಿಗೆ ಇದೊಂದು ನಿದರ್ಶನ

ಏಡನ್ ನಗರಕ್ಕೆ ಒಳಚರಂಡಿ ವ್ಯವಸ್ಥೆ ಮಾಡಲು ಸುಮಾರು ೫ಲಕ್ಷ ವೆಚ್ಚವಾಗಬಹುದು. ಈ ಹಣವನ್ನು ಸಾಲವಾಗಿ ಎತ್ತಿದರೂ, ಆದರ ಬಡ್ಡಿ ಸೇರಿ ವರ್ಷಂಪ್ರತಿ ರೂ ೩೦,೦೦೦ ಆದೀತು. ತಲೆಗಿಷ್ಟೆಂದು ಪ್ರಜಾ ಸಂಖ್ಯೆಯ ಆಧಾರದ ಮೇಲೆ ಲೆಕ್ಕ ಹಾಕಿದರೆ ಇದೇನೂ ಹೆಚ್ಚಲ್ಲ-ಎಂದು ತಮ್ಮ ಯೋಜನೆಯನ್ನು ಸಮರ್ಥಿಸಿದ್ದರು ಇದಕ್ಕೆ ಪ್ರತಿಯಾಗಿ ಮಾತನಾಡಬಲ್ಲ ಶಕ್ತರಾರು ? ಸರಕಾರ ಈ ಸಲಹೆಗಳನ್ನು ಅಂಗೀಕರಿಸಿದುದೇ ಅಲ್ಲದೆ, ತಮ್ಮ ಮೆಚ್ಚುಗೆಯನ್ನು ತೋರ್ಪಡಿಸಲು 'ಕೈಸರ್-ಎ-ಹಿಂದ್' ಎಂಬ ಪ್ರಶಸ್ತಿ ಪದಕವನ್ನು ವಿಶ್ವೇಶ್ವರಯ್ಯನವರಿಗೆ ದಯಪಾಲಿಸಿತು.

# ಬೊಂಬಾಯಿ ಸರಕಾರದ ಕೆಲಸದಿಂದ ನಿವೃತ್ತಿ

ಸರಕಾರಿ ನೌಕರಿಯಲ್ಲಿರುವವರು ನಿರ್ಧಾರಿತ ನಿಯಮದಂತೆ ಉನ್ನತ ಪದವಿಗಳಿಗೆ ಏರುತ್ತ ಹೆಚ್ಚು ಹೆಚ್ಚು ಸಂಬಳ ಪಡೆಯುತ್ತಾರೆ. ಇದೊಂದು ಕುರುಡು ನಿಯಮ. ಆದರೆ, ನಿಜಸಾಮರ್ಥ್ಯವಂತರೂ ಬೇಗ ಬೇಗನೆ ಉನ್ನತ ಪದವಿಗೆ ಏರಲೂ ಬಹುದು. ಇದೇ ರೀತಿ ತಮ್ಮ ಅಪಾರ ಸಾಮರ್ಥ್ಯಗಳಿಂದ ವಿಶ್ವೇಶ್ವರಯ್ಯನವರು ಸರಕಾರದ ಮಾನ್ಯತೆಗೆ ಪಾತ್ರರಾಗಿ, ತಮಗಿಂತಲೂ ಹೆಚ್ಚು ಕಾಲ ಉದ್ಯೋಗದಲ್ಲಿದ್ದವರನ್ನು ಮೀರಿಸಿ ತೀವ್ರಗತಿಯಿಂದ ಮೇಲೇರುತ್ತಾ ಬಂದರು. ಒಮ್ಮೆಗೇ ಆಂಗ್ಲ ಅಧಿಕಾರಿಗಳ ಮೇಲೆ ಅವರಿಗೆ ಬಡ್ತಿ ಕೊಡಲಾಯಿತು. ಇದರಿಂದ ಹಲವರಿಗೆ ಅಸೂಯೆ ಅಸಮಾಧಾನಗಳಿಗೆ ಕಾರಣವಾಗದೆ ಹೋಗಲಿಲ್ಲ. ಅಂದಿನ ರಾಜಕೀಯ ವಾತಾವರಣದಲ್ಲಿ ಭಾರತೀಯರಿಗೆ ಉನ್ನತ ಪದವಿಗಳು ದೊರೆಯುವುದೂ ದುರ್ಲಭವಾಗಿತ್ತು. ಅದುವರೆಗೆ ಬೊಂಬಾಯಿ ಪ್ರಾಂತದ ಛೀಫ್ ಇಂಜಿನಿಯರರಾಗಿ ಯಾವ ಭಾರತೀಯನನ್ನೂ ನೇಮಿಸಿರಲಿಲ್ಲ. ಕೆಳದರ್ಜೆಯವರಿಗೆ ಅಸೂಯೆ, ಮೇಲು ದರ್ಜೆಯ ಉನ್ನತ ಪದವಿಯ ದುರ್ಲಭತೆ ಈ ಜಂಝಾಟದಲ್ಲಿ ಬೊಂಬಾಯಿ ಸರಕಾರದ ನೌಕರಿಯಲ್ಲಿ ಹೆಚ್ಚುಕಾಲವಿರುವ ಆಸಕ್ತಿ ಅವರಲ್ಲಿ ಉಳಿಯಲಿಲ್ಲ. ಈ ನಿರಾಶಾದಾಯಕ ಸನ್ನಿವೇಶದಲ್ಲಿ ಕೆಲಸದಿಂದ ನಿವೃತ್ತರಾಗುವುದೇ ಮೇಲೆಂದು ಎಣಿಸಿ ತಮ್ಮನ್ನು ಕೆಲಸದಿಂದ ನಿವೃತ್ತಿ ಮಾಡಬೇಕೆಂದು ಸರಕಾರಕ್ಕೆ ಬರೆದುಕೊಂಡರು. ಹಠಾತ್ತನೆ ಬಂದ ಈ ಕಾಗದದಿಂದ ಸರಕಾರಕ್ಕೆ ಆಶ್ಚರ್ಯವಾಯಿತು. ಇಷ್ಟು ತೀವ್ರ ಗತಿಯಲ್ಲಿ ಮೇಲಿಂದ ಮೇಲೆ ಬಡ್ತಿ ಕೊಡುತ್ತಾ ಬಂದರೂ ಇವರು ಮುನಿಸಿಕೊಂಡು ನಿವೃತ್ತರಾಗ ಬಯಸಿದ್ದಾರಲ್ಲಾ ಎಂದು ಸರಕಾರಕ್ಕೆ ಆಶ್ಚರ್ಯ. ಅನೇಕ ಆಂಗ್ಲ ಮತ್ತು ಭಾರತೀಯ

ಹಿತೈಷಿಗಳೂ ಅಧಿಕಾರ ವರ್ಗದವರೂ, ಕಾಲಕ್ಕೆ ಮೊದಲೇ ಈ ರೀತಿ ನಿವೃತ್ತಿ ಪಡೆಯುವುದು ಸರಿಯಲ್ಲವೆಂದು ಅವರಿಗೆ ತಿಳಿಸಿದರು. ವಿಶ್ವೇಶ್ವ ರಯ್ಯನವರು ಬೊಂಬಾಯಿ ಸರಕಾರದ ಕೆಲಸಕ್ಕೆ ಸೇರಿದ್ದು ೧೮೮೪ರಲ್ಲಿ. ನಿವೃತ್ತಿ ವೇತನ ಪಡೆಯಲು ೨೫ ವರುಷ ಕಾಲವಾದರೂ ಸೇವೆ ಸಲ್ಲಿಸಬೇಕು ಅವರು ನೌಕರಿಗೆ ಸೇರಿ ೨೩ ವರುಷ ಮಾತ್ರ ಆಗಿದ್ದಿತು. ನಿವೃತ್ತಿ ವೇತನಕ್ಕೆ ಪಾತ್ರರಾಗಿರಲಿಲ್ಲ ಆದ್ದರಿಂದ ಇನ್ನೆರಡು ವರುಷಗಳಾದರೂ ನೌಕರಿಯಲ್ಲಿದ್ದು ನಿವೃತ್ತಿ ವೇತನದ ಅರ್ಹತೆಗಳಿಸುವುದು ಮೇಲೆಂದು ಹಲವರ ಅಭಿಪ್ರಾಯ ಈ ವೇಳೆಗೆ ವಿಶ್ವೇಶ್ವರಯ್ಯನವರ ಶಕ್ತಿಸಾಮರ್ಥ್ಯ ಗಳನ್ನು ಮನಗಂಡು ಅವರ ಸೇವೆಯನ್ನು ಪಡೆಯಬೇಕೆಂಬ ಆಕಾಂಕ್ಷೆ ಯಿಂದ ಛೀಫ್ ಇಂಜನಿಯರ್ ಸ್ಥಾನ ಕೊಡುವುದಾಗಿ ಎರಡು ಸಂಸ್ಥಾನ ಗಳಿಂದ ಇವರಿಗೆ ಕರೆ ಬಂದಿತ್ತು. ಯಾವ ಆಂಗ್ಲೇಯನಿಗೂ ಬುದ್ಧಿ ಸಾಮ ರ್ಥ್ಯವಲ್ಲಿಯೂ, ದಕ್ಷತೆಯಲ್ಲಿಯೂ ಕಡಮೆಯಿಲ್ಲದ ವಿಶ್ವೇಶ್ವರಯ್ಯನವರಿಗೆ, ತನಗೆ ಬೊಂಬಾಯಿ ಸರಕಾರದಲ್ಲಿ ಛೀಫ್ ಇಂಜಿನಿಯರ ಸ್ಥಾನ ದೊರೆಯದೇ ಹೋದರೆ ಅಲ್ಲಿ ಕ್ಷಣಕಾಲವಿರುವುದಕ್ಕೂ ಮನಸ್ಸು ಒಪ್ಪಲಿಲ್ಲ. ಅದೆಂತಹ ಕೆಚ್ಚೆದೆ, ಸ್ವಾಭಿಮಾನ, ದೇಶಪ್ರೇಮ! ರಾಜೀನಾಮೆಯನ್ನು ಸಲ್ಲಿಸಿಯೇ ಬಿಟ್ಟರು.

ಆದರೆ ಬೊಂಬಾಯಿ ಸರಕಾರವೂ ಕೃತಘ್ನವಾಗಲಿಲ್ಲ. ಆಗಿನ ಗವರ್ನ ರಾಗಿದ್ದ ಲಾರ್ಡ್ ಸಿಡ್ನಹ್ಯಾಂ ಅವರು ವಿಶ್ವೇಶ್ವರಯ್ಯನವರ ವಿಶೇಷ ಸಾಮರ್ಥ್ಯ ದಕ್ಷತೆಗಳಿಗೆ ಮೆಚ್ಚಿ, ನಿವೃತ್ತಿವೇತನಕ್ಕೆ ಅವರು ಅರ್ಹರಾಗದಿದ್ದರೂ, ಪೂರ್ಣ ನಿವೃತ್ತಿ ವೇತನವನ್ನು ಕೊಡುವಂತೆ ಆಜ್ಞೆಮಾಡಿದರು. ಅಲ್ಲದೆ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿ, ಯಶಸ್ಸನ್ನು ಕೋರುವ ವಿಶೇಷ ಪತ್ರವನ್ನು ವಿಶ್ವೇಶ್ವರಯ್ಯನವರಿಗೆ ಬರೆದು ಕಳುಹಿಸಿದರು.

ಇಲ್ಲಿಗೆ ಬೊಂಬಾಯಿ ಸರಕಾರದ ಸೇವಾ ಪ್ರಕರಣ ಕೊನೆಗಂಡಿತು.

ಬೊಂಬಾಯಲ್ಲಿ ಸ್ಯಾನಿಟರಿ ಇಂಜನಿಯರಾಗಿದ್ದ ಕಾಲದಲ್ಲಿ ಕೊಲ್ಹಾ ಪುರ ಸಂಸ್ಥಾನದಿಂದ ಅತ್ಯವಸರದ ಆಹ್ವಾನವೊಂದು ಬಂದಿತು. ಕೊಲ್ಹಾ

ಪುರದ ನಗರಕ್ಕೆ ನೀರನ್ನೊದಗಿಸುತ್ತಿದ್ದ ಕೆರೆಯ ಮಣ್ಣಿನ ಏರಿಯ ಒಂದು ದೊಡ್ಡ ಭಾಗವು ಕುಸಿದು ಬಿದ್ದು ಬಹಳ ಅಪಾಯಕರ ಸ್ಥಿತಿಯಲ್ಲಿದೆ. ಸಕಾಲದಲ್ಲಿ ಇದನ್ನು ಸರಿಪಡಿಸದೆ ಹೋದರೆ ಊರಿಗೆ ಕುಡಿಯುವ ನೀರೇ ಇಲ್ಲದಂತೆ ಆದೀತು. ಏರಿಯನ್ನು ಸರಿಪಡಿಸಲು ದಕ್ಷನಾದ ಒಬ್ಬ ಆಂಗ್ಲ ಇಂಜಿನಿಯರನ್ನು ಕಳುಹಿಸಬೇಕು, ಎಂದು ಕೊಲ್ಹಾಪುರದಲ್ಲಿ ಬ್ರಿಟಿಷ್ ಪ್ರಭುತ್ವದ ಪ್ರತಿನಿಧಿಯಾಗಿದ್ದ ಫೆರಿಸ್ ಅವರು ಬೊಂಬಾಯಿ ಸರಕಾರಕ್ಕೆ ಮನವಿ ಮಾಡಿಕೊಂಡರು.

ಬೊಂಬಾಯಿ ಸರಕಾರದವರು ಆಂಗ್ಲ ಅಧಿಕಾರಿಯ ಬದಲಾಗಿ ದಕ್ಷರಾದ ವಿಶ್ವೇಶ್ವರಯ್ಯನವರನ್ನೇ ಕಳುಹಿಸಿಕೊಟ್ಟರು. ಇವರು ಕೆರೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆರೆಕಟ್ಟೆಯ ದುರಸ್ತಿಯ ಬಗ್ಗೆ ಸೂಕ್ತ ಸಲಹೆಗಳನ್ನಿತ್ತರು. ಚಾಚೂತಪ್ಪದೆ ಇವರ ಸಲಹೆಯಂತೆಯೇ ದುರಸ್ತಿ ಕೆಲಸಗಳು ನಡೆದವು. ಕೆಲಸ ನಡೆಯುತ್ತಿದ್ದಾಗ ಮೂರು-ನಾಲ್ಕಾವರ್ತಿ ಮೇಲ್ವಿಚಾರಣೆ ನಡೆಸಲು ವಿಶ್ವೇಶ್ವರಯ್ಯನವರೇ ಹೋಗಿ ಬಂದರು. ಶಿಥಿಲವಾಗಿದ್ದ ಕೆರೆಯು ದುರಸ್ತಿಯಾದಮೇಲೆ ಮೊದಲಿಗಿಂತಲೂ ಸುಭದ್ರವಾಯಿತು ಇವರ ಕೆಲಸವನ್ನು ಮೆಚ್ಚಿ ಕೊಲ್ಹಾಪುರದ ಸರಕಾರದವರೂ, ಫೆರಿಸ್ ಅವರೂ ವಿಶ್ವೇಶ್ವರಯ್ಯನವರ ಸಾಮರ್ಥ್ಯವನ್ನು ಕೊಂಡಾಡಿ ಬೊಂಬಾಯಿ ಸರಕಾರಕ್ಕೆ ಪ್ರಶಂಸಾ ಪತ್ರ ಬರೆದರು. ಕೆರೆಯಕಟ್ಟೆ ದುರಸ್ತಿಯಾದ ಮೇಲೆ ವಿಶೇಷ ಮಳೆಯ ದೆಸೆಯಿಂದ ಕೆರೆಯು ತುಂಬಿ ತುಳುಕುತ್ತಿದ್ದರೂ, ಕಟ್ಟೆಯು ಮಾತ್ರ ಭದ್ರವಾಗಿಯೇ ಇದೆ ಎಂಬ ಅಂಶವನ್ನೂ, ತಮ್ಮ ಧನ್ಯವಾದಗಳನ್ನೂ ವಿಶ್ವೇಶ್ವರಯ್ಯನವರಿಗೆ ತಿಳಿಸುವಂತೆ ಫೇರಿಸ್ ಅವರು ವಿಶೇಷ ಪ್ರಾರ್ಥನೆ ಮಾಡಿಕೊಂಡಿದ್ದರು.

ವಿಶ್ವೇಶ್ವರಯ್ಯನವರು ಇಡೀ ಬೊಂಬಾಯಿ ಪ್ರಾಂತದ ಸ್ಯಾನಿಟರಿ ಅಥವಾ ಸಫಾಯಿ ಇಂಜಿನಿಯರಾಗಿದ್ದುದು ಮಾತ್ರವಲ್ಲದೆ ನೀರಾವರಿ ಶಾಖೆಯ ವಿಶೇಷ ಅಧಿಕಾರಿಗಳೂ ಆಗಿದ್ದರು.

ಇದಲ್ಲದೆ ಅನೇಕ ಸಮಿತಿಗಳ ಸದಸ್ಯರಾಗಿದ್ದು ಕ್ಷಣಕಾಲವೂ ವಿರಾಮವಿಲ್ಲದೆ ದುಡಿಯುತ್ತಿದ್ದರು. ಬೊಂಬಾಯಿನಗರದ ಸಾರ್ವಜನಿಕ

ಸ್ವಾಸ್ಥ್ಯವನ್ನು ಹೆಚ್ಚಿಸಲು ಸೂಕ್ತ ಸಲಹೆ ಕೊಡುವ ಸಲುವಾಗಿ, ಅಲ್ಲಿಯ ವೈದ್ಯಾಧಿಕಾರಿಗಳ ನೇತೃತ್ವದಲ್ಲಿ ಒಂದು ವಿಶೇಷ ಸಮಿತಿ ಏರ್ಪಾಡಾಗಿತ್ತು. ಹೆಸರಾಂತ ಸರ್ ಫಿರೋಜ್ ಷಾ ಮೆಹ್ತಾ ಅವರೂ ವಿಶ್ವೇಶ್ವರಯ್ಯನವರೂ ಈ ಸಮಿತಿಯ ಸದಸ್ಯರಾಗಿದ್ದರು. ಈ ಸಮಿತಿಯ ವರದಿಯು ಸರಕಾರದ ಮೆಚ್ಚುಗೆಗೆ ಪಾತ್ರವಾಯಿತು.

ಪೂನಾದಲ್ಲಿದ್ದ ವಿಜ್ಞಾನ ಕಲಾಶಾಲೆಯ ಪಾಠಪ್ರವಚನಗಳನ್ನು ಸರಿಯಾಗಿ ಅಣಿಮಾಡುವಂತೆ ಮೂವರು ತಜ್ಞರ ಒಂದು ಸಮಿತಿಯನ್ನು ಸರಕಾರವು ಸೇರಿಸಿತು. ವಿದ್ಯಾ ಇಲಾಖೆಯ ಡೈರೆಕ್ಟರು, ಕಲಾಶಾಲೆಯ ಮುಖ್ಯೋಪಾಧ್ಯಾಯರು ಮತ್ತು ವಿಶ್ವೇಶ್ವರಯ್ಯನವರು ಈ ಸಮಿತಿಯ ಸದಸ್ಯರು. ಪಾಠಕ್ರಮಗಳನ್ನು ಅಳವಡಿಸಿ ಕೊಟ್ಟ ಈ ಸಮಿತಿಯ ಸೂಚನೆಗಳನ್ನು ಸರಕಾರವು ಅಂಗೀಕರಿಸಿತು. 'ವಿಜ್ಞಾನ ಕಲಾಶಾಲೆ' ಎಂಬ ಹೆಸರು 'ಇಂಜಿನಿಯರಿಂಗ್ ಕಲಾಶಾಲೆ' ಎಂದು ಮಾರ್ಪಾಟಾದುದು ಈ ಸಮಿತಿಯ ಸಲಹೆಯ ಮೇರೆಗೇ

೧೯೦೪ ರಲ್ಲಿ ವಿಶ್ವೇಶ್ವರಯ್ಯನವರು ಬೊಂಬಾಯಿ ವಿಶ್ವವಿದ್ಯಾಲಯದ ಸೆನೆಟ್ ಸಭೆಯ ಸದಸ್ಯರಾಗಿ ನಿಯಮಿಸಲ್ಪಟ್ಟರು. ವಿಶ್ವವಿದ್ಯಾಲಯದ ನಿಯಮಾವಳಿಗಳನ್ನು ರಚಿಸಿ ಒಪ್ಪಿಸುವ ಜವಾಬ್ದಾರಿಯು ಇವರದಾಗಿತ್ತು.

# ಹೈದರಾಬಾದಿನಲ್ಲಿ

ಪ್ರಪಂಚ ವೇಗವಾಗಿ ಮುಂಬರಿಯುತ್ತಿದೆಯಲ್ಲ. ನಮ್ಮ ದೇಶವೂ ಪಾಶ್ಚಿಮಾತ್ಯ ದೇಶಗಳಂತೆ ಕೈಗಾರಿಕೆ, ಯಂತ್ರಗಾರಿಕೆ, ಆಧುನಿಕ ಪ್ರಯೋಗಗಳು, ವಿಜ್ಞಾನ ಇವುಗಳಲ್ಲಿ ಪ್ರಗತಿ ಪರವಾಗಬೇಕು ಎಂದು ವಿಶ್ವೇಶ್ವರಯ್ಯನವರ ತೀವ್ರ ಅಭಿಲಾಷೆ. ಪಾಶ್ಚಿಮಾತ್ಯ ದೇಶಗಳ ಪ್ರಗತಿಯನ್ನು ತಾವೇ ಕಣ್ಣಾರೆ ನೋಡಿ ತಿಳಿದು ಜ್ಞಾನಾರ್ಜನೆ ಮಾಡಿ ತಮ್ಮ ಅನುಭವವನ್ನು ಈ ದೇಶಕ್ಕೆ ದೊರಕಿಸಿ ಕೊಡಬೇಕೆಂಬ ಹಂಬಲ ಈ ಅಭಿಲಾಷೆಯಿಂದ ಪರದೇಶಗಳ ಪರ್ಯಟನವನ್ನು ಬಹುವಾಗಿ ಮಾಡಿದಾರೆ. ಯೂರೋಪ್‌ನ ಪ್ರತಿಯೊಂದು ರಾಜ್ಯದಲ್ಲಿಯೂ ಅವರು ಸಂಚರಿಸಿದ್ದಾರೆ. ಪ್ರತಿಯೊಂದು ಮುಖ್ಯ ಪಟ್ಟಣದಲ್ಲಿಯೂ ಹಲವಾರು ದಿನಗಳಾದರು ತಂಗಿ ಅಲ್ಲಿನ ವಿದ್ಯಮಾನಗಳನ್ನು ವೀಕ್ಷಿಸಿ ಆಮೂಲಾಗ್ರವಾಗಿ ವಿಷಯ ಸಂಗ್ರಹ ಮಾಡಿದಾರೆ. ಯೂರೋಪ್ ಎಲ್ಲವೂ ಅವರಿಗೆ ಕರತಲಾಮಲಕ. ಅಂತೆಯೇ ಅಮೇರಿಕ ಮತ್ತು ಜಪಾನ್, ಚೀನ, ರಷ್ಯ, ಆಸ್ಟ್ರೇಲಿಯ, ಆಫ್ರಿಕ ಖಂಡಗಳಲ್ಲಿಯೂ ಸಂಚರಿಸಿ ಅಪೂರ್ವ ಅನುಭವ ಪಡೆದು, ಅದನ್ನು ದೇಶಕ್ಕೆ ಸಮರ್ಪಿಸುವುದರಲ್ಲಿ ಅವರಿಗೆ ಸಂತಸ

ಬೊಂಬಾಯಿ ಸರಕಾರದ ಕೆಲಸಕ್ಕೆ ರಾಜೀನಾಮೆ ಸಲ್ಲಿಸಿದ ತರುವಾಯ ವಿಶ್ವಪರ್ಯಟನವನ್ನು ಅವರು ಕೈಗೊಂಡರು. ಈ ಪರ್ಯಟನವೆಲ್ಲ ಸ್ವಂತ ವೆಚ್ಚದಲ್ಲಿ, ಸರಕಾರದ ಹಣದಿಂದಲ್ಲ.

ಹೀಗೆ ಪ್ರವಾಸ ಕೈಗೊಂಡಿದ್ದಾಗಲೂ ಅವರ ಸೇವೆಯು ಸ್ವದೇಶಕ್ಕೆ ಅಗತ್ಯವಾಗಿತ್ತು ಹೈದರಾಬಾದಿನಲ್ಲಿ ನೆರೆಯ ಹಾವಳಿಯನ್ನು ತಡೆ

ಗಟ್ಟಲು ಏನಾದರೂ ವ್ಯವಸ್ಥೆ ಮಾಡಬೇಕಾಗಿತ್ತು. ಸಮರ್ಥರಾದ ವಿಶ್ವೇಶ್ವರಯ್ಯನವರ ಸಹಾಯವನ್ನು ಅವರು ಅಪೇಕ್ಷಿಸಿದರು. ನಿವೃತ್ತಿಯ ಮುನ್-ರಜಾದಲ್ಲಿದ್ದ ಅವರ ಸೇವೆಯನ್ನು ಬೊಂಬಾಯಿ ಗವರ್ನರು ಲಂಡನ್ನಲ್ಲಿರುವ ಇಂಡಿಯ ಕಾರ್ಯದರ್ಶಿಯ ಮೂಲಕ ಪ್ರಾರ್ಥಿಸಿದರು ಇಟಲಿಗೆ ಸೇರಿದ ಮಿಲಾನ್‌ನಗರದಲ್ಲಿ ಸಂಚರಿಸುತ್ತಿದ್ದಾಗ ಹಠಾತ್ತಾಗಿ ವಿಶ್ವೇಶ್ವರಯ್ಯನವರಿಗೆ ಹೈದರಾಬಾದಿಗೆ ಕೂಡಲೇ ಹಿಂತಿರುಗಿ ಬರಬೇಕೆಂದು ತಂತಿಬಂದಿತು. ತಮ್ಮ ಪ್ರವಾಸವನ್ನು ಹಠಾತ್ತಾಗಿ ಕೊನೆಗಣಿಸಲು ಇಷ್ಟಪಡದೆ, ಅಮೆರಿಕದ ಪ್ರವಾಸವನ್ನು ಮುಗಿಸಿಕೊಂಡು ಆರು ತಿಂಗಳ ತರುವಾಯ ತಾವು ಬರುವುದಾಗಿ ತಿಳಿಸಿ ವಿಶ್ವೇಶ್ವರಯ್ಯನವರು ಕೆಲವು ಷರತ್ತುಗಳನ್ನು ಹಾಕಿದರು. ವಿಶ್ವೇಶ್ವರಯ್ಯನವರೇ ಈ ಕೆಲಸವನ್ನು ಕೈಗೊಳ್ಳಬೇಕೆಂದು ಕಾತರವಾಗಿದ್ದ ಹೈದರಾಬಾದಿನ ಸರಕಾರವು ಎಲ್ಲ ಷರತ್ತುಗಳನ್ನೂ ಒಪ್ಪಿಕೊಂಡಿತು. ಅವರು ಬೇಡಿದ ಸಂಬಳವನ್ನೂ, ಸಿಬ್ಬಂದಿಯನ್ನೂ ಕೊಡಲೊಪ್ಪಿತು. ಎಲ್ಲರೂ ನೌಕರಿಗಾಗಿ ಹಾತೊರೆಯುತ್ತಿದ್ದರೆ ಭಾರತೀಯರಿಗೆ ಇದುವರೆಗೆ ಸಲ್ಲದ ಹುದ್ದೆಗಳು ಇವರ ಬೆನ್ನು ಹತ್ತಿ ಬರುತ್ತಿದ್ದುವು.

ಅಮೆರಿಕದ ಪ್ರವಾಸ ಮುಗಿಸಿಕೊಂಡು ಭಾರತಕ್ಕೆ ಮರಳಿ ಬಂದು ಏಪ್ರಿಲ್ ೧೯೦೯ ರಲ್ಲಿ ಹೈದರಾಬಾದಿನಲ್ಲಿ ವಿಶೇಷ ಇಂಜಿನಿಯರ್ ಪದವಿಯನ್ನು ಸ್ವೀಕರಿಸಿದರು. ಹೈದರಾಬಾದ್‌ನಗರದ ಪುನರ್ನಿರ್ಮಾಣ; ನಗರವು ನೆರೆಯ ಹಾವಳಿಯಿಂದ ನಾಶವಾಗದಂತೆ ಸಂರಕ್ಷಣಾ ಯೋಜನೆ; ಹೈದರಾಬಾದ ಮತ್ತು ಚಾದರ್‌ಘಾಟ್ ಇವುಗಳ ನೈರ್ಮಲ್ಯ; ಒಳಚರಂಡಿಗಳ ವ್ಯವಸ್ಥೆ ಇವು ವಿಶ್ವೇಶ್ವರಯ್ಯನವರ ಮುಖ್ಯ ಕಾರ್ಯ.

ಹೈದರಾಬಾದು ನಗರದ ನಡುವೆ ಮೂಸಾ ನದಿ ಹರಿಯುತ್ತದೆ ನದಿಯ ಇಕ್ಕೆಲಗಳಲ್ಲಿಯೂ ಊರು. ದೊಡ್ಡದಲ್ಲವಾದರೂ ಮಳೆಗಾಲದಲ್ಲಿ ಪ್ರವಾಹದ ದೆಸೆಯಿಂದ ನದಿಯ ನೀರು ಊರೊಳಗೆ ನುಗ್ಗಿ ಆಗಾಗ್ಗೆ ಬಹಳ ತೊಂದರೆಯಾಗುತ್ತಿತ್ತು. ೧೯೦೮ ರಲ್ಲಿ ಈ

ಪ್ರವಾಹದಿಂದ ಅಪಾರ ನಷ್ಟ ಸಂಭವಿಸಿತು. ಸೆಪ್ಟಂಬರ್ ೨೮ ಹೈದರಾಬಾದಿನವರು ಎಂದಿಗೂ ಮರೆಯಲಾಗದ ದುರ್ದಿನ. ಎಂದೂ ಕಂಡುಕಾಣದ ಧಾರಾಕಾರ ವೃಷ್ಟಿ. ಆ ದಿನ ಕೆಲವೆಡೆಗಳಲ್ಲಿ ೧೨ ರಿಂದ ೧೮ ಅಂಗುಲಮಳೆ ಸುರಿಯಿತು ಕಳೆದ ೭೫ ವರುಷಗಳಲ್ಲಿ ಇಂಥ ಮಳೆ ಯಾವಾಗಲು ಆಗಿರಲಿಲ್ಲ. ಎತ್ತನೋಡಿದರೊ ನೀರೇ ನೀರು, ಜಲಪ್ರಳಯ ಸುತ್ತ ಮುತ್ತ ಬೀಳುವ ನೀರೆಲ್ಲವೂ ಮೂಸಾ ನದಿಗೆ ಬಂದು ಸೇರುತ್ತದೆ. ಮೂಸಾ ನದಿಯ ಮೇಲ್ಭಾಗದಲ್ಲಿ ೮೬೦ ಚದರ ಮೈಲಿಯ ವಿಸ್ತೀರ್ಣದಲ್ಲಿ ೭೭೮ ಕೆರೆಗಳಿವೆ. ಸುಮಾರು ಒಂದು ಚದರ ಮೈಲಿಗೊಂದು ಕೆರೆ ಹಠಾತ್ತನೆ ಒಂದೇ ಸಮನೆ ಸುರಿದ ಮಳೆಯ ದೆಸೆಯಿಂದ ಕೆರೆಕಟ್ಟೆಗಳೆಲ್ಲವೂ ತುಂಬಿ ಹೋಗಿ ಕೋಡಿ ಹರಿದುವು ಸುಮಾರು ೨೧ ಕೆರೆಗಳು ಒಡೆದು, ಮೊದಲೇ ತುಂಬಿ ಹರಿಯುತ್ತಿದ್ದ ಮೂಸಾ ಮತ್ತು ಇಯಾಸಿ ನದಿಗಳಿಗೆ ನೀರು ನುಗ್ಗಲಾರಂಭಿಸಿತು. ಹೊಳೆಯ ದಂಡೆಗಳು ಕುಸಿದು ನೀರು ಊರೊಳಕ್ಕೆಲ್ಲಾ ನುಗ್ಗಿತು. ಅನೇಕ ದೊಡ್ಡದೊಡ್ಡ ಮನೆಗಳು ಪ್ರವಾಹದ ಹೊಡೆತಕ್ಕೆ ಸಿಕ್ಕಿ ಉರುಳಿ ಹೋದುವು. ಎತ್ತ ನೋಡಿದರತ್ತ ಹರಿಯುವ ನೀರು, ಭಯಂಕರ ಜಲಪ್ರಳಯ ದೊಡ್ಡ ಮನೆಗಳ ಮೇಲೂ ಮರಗಳ ಮೇಲೂ ಜನರು ಆಶ್ರಯ ಪಡೆದರು. ಸಾವಿರಾರು ದನಕರುಗಳೂ, ಪಶು ಪಕ್ಷಿಗಳೂ ನಾಶವಾದುವು ಕೋಲ್ಸಿವಾಡಿ ಎಂಬ ಭಾಗದಲ್ಲಿ ಸುಮಾರು ೨,೦೦೦ ಜನ ಪ್ರವಾಹಕ್ಕೆ ಬಲಿಯಾದರೆಂದು ವದಂತಿ.

ಹೆಚ್ಚು ಮಳೆಯಾದಾಗಲೆಲ್ಲಾ ಮೂಸಾ ಮತ್ತು ಅದರ ಉಪನದಿಯಾದ ಇಯಾಸಾ ಈ ಎರಡು ನದಿಗಳಿಂದ ಹೈದರಾಬಾದಿಗೆ ಸಂಭವಿಸುತ್ತಿರುವ ಸಂಕಟವನ್ನು ಯಾವರೀತಿ ತಪ್ಪಿಸಬೇಕೆಂದು ವಿಶ್ವೇಶ್ವರಯ್ಯನವರು ಯೋಚಿಸತೊಡಗಿದರು. ಉಭಯ ನದಿಗಳಿಗೂ ಆಣೆಕಟ್ಟನ್ನು ಕಟ್ಟಿ ಪ್ರವಾಹವು ಉಕ್ಕಿ ಹರಿಯದಂತೆ ನೀರನ್ನು ತಡೆಗಟ್ಟುವುದೇ ಇದಕ್ಕೆ ಸರಿಯಾದ ಯುಕ್ತಿ ಎಂಬ ತೀರ್ಮಾನಕ್ಕೆ ಬಂದರು. ಈ ಅಣೆಕಟ್ಟೆ ಕಟ್ಟೆಗಳನ್ನು ಕಟ್ಟಿಸಬೇಕಾದ ಸ್ಥಳ, ಅವುಗಳ ಎತ್ತರ, ಉದ್ದ, ಗಾತ್ರ ಇತ್ಯಾದಿ ಅವಶ್ಯಕ ಅಂಕಿ ಅಂಶಗಳನ್ನು ಯೋಗ್ಯರಾದ ಇಂಜನಿಯರುಗಳಿಂದ ಪರಿ

ಶೀಲನೆ ಅಥವಾ ಸರ್ವೆ ನಡೆಸಿ ವಿಷಯ ಸಂಗ್ರಹ ಮಾಡಿದರು. ಎಂಟುವರೆ ಮೈಲಿ ಮೇಲುಗಡೆ ಮೂಸಾ ನದಿಗೂ, ಆರೂವರೆಮೈಲಿ ಮೇಲುಗಡೆ ಇಯಾಸಿ ನದಿಗೂ ಅಣೆಕಟ್ಟುಗಳನ್ನು ಕಟ್ಟಬೇಕು. ಊರಿನಲ್ಲಿ ಹರಿಯುವ ಮೂಸಾ ನದಿಯ ತಗ್ಗಾದ ದಡಗಳನ್ನು ಎತ್ತರಿಸಿ ಬಲಪಡಿಸಬೇಕು. ಇದು ನೆರೆಯ ಹಾವಳಿಯನ್ನು ತಡೆಗಟ್ಟಲು ಸೂಕ್ತವಾದ ಮಾರ್ಗವೆಂದು ಸೂಚಿಸಿದರು. ಮೂಸಾ ನದಿಯ ಉತ್ತರ ದಡವು ದಕ್ಷಿಣ ದಡಕ್ಕಿಂತ ತಗ್ಗಾಗಿದ್ದು, ಆ ಭಾಗಕ್ಕೆ ದಡವನ್ನು ಎತ್ತರಿಸಲು ಅಲ್ಲಿ ವಿಸ್ತಾರವಾಗಿ ದಡ ಕಟ್ಟಬೇಕಾಯಿತು. ಇದರಿಂದ ನದಿಯ ನೋಟದ ಸೊಬಗು ಕೆಡಬಾರದೆಂದು ದಡದ ಮೇಲೆ ಸುಂದರ ಉದ್ಯಾನವನಗಳನ್ನೂ, ವಿಹಾರ ಸ್ಥಳಗಳನ್ನೂ ಕಲ್ಪಿಸುವ ಸೂಚನೆ ಕೊಟ್ಟರು. ಉಪಯುಕ್ತತೆಯ ಜೊತೆಗೆ ಸೌಂದರ್ಯವನ್ನೂ ಜೋಡಿಸಿಕೊಂಡು ಹೋಗುವ ಕಲಾ ಸಾಮರ್ಥ್ಯ ವಿಶ್ವೇಶ್ವರಯ್ಯನವರ ವೈಶಿಷ್ಟ್ಯ. ಮೈಸೂರಿನ ಕೃಷ್ಣರಾಜ ಸಾಗರ ಬೃಂದಾವನಗಳ ಸುಂದರ ಮಾಧುರ್ಯದ ಒಂದೊಂದು ವಿವರವೂ ಆ ವೈಶಿಷ್ಟ್ಯವನ್ನು ಲೋಕಕ್ಕೆ ಎತ್ತಿ ತೋರಿಸುತ್ತಿದೆ.

ಆರು ತಿಂಗಳ ಅವಧಿಯಲ್ಲಿ ವಿಶ್ವೇಶ್ವರಯ್ಯನವರು ಸಿದ್ಧಗೊಳಿಸಿದ ಈ ಯೋಜನೆಯನ್ನು ನಿಜಾಂ ಸರಕಾರವು ಕೂಲಂಕಷವಾಗಿ ಪರಿಶೀಲಿಸಿತು. ಭಾರತೀಯನಾದ ಒಬ್ಬ ಇಂಜಿನಿಯರು, ಅವನು ಎಷ್ಟೇ ಖ್ಯಾತಿಗಳಿಸಿರಲಿ ಅವನ ಯೋಜನೆ ಸಮರ್ಪಕವಾಗಿದ್ದೀತೆ ಎಂದು ಸಂದೇಹ ಸರಕಾರಕ್ಕೆ ಈ ಸಂಶಯ ನಿವಾರಣೆಗಾಗಿ ಮೊದಲು ಹೈದರಾಬಾದಿನಲ್ಲಿ ಇಂಜಿನಿಯರಾಗಿದ್ದು ತರುವಾಯ ಮದರಾಸಿನಲ್ಲಿದ್ದ ಒಬ್ಬ ಸುಪ್ರಸಿದ್ಧ ಆಂಗ್ಲ ಇಂಜಿನಿಯರಿಗೆ ವಿಶ್ವೇಶ್ವರಯ್ಯನವರ ಯೋಜನೆಯನ್ನು ಪರಿಶೀಲಿಸುವಂತೆ ಒಪ್ಪಿಸಲಾಯಿತು ಆತ ಈ ಯೋಜನೆಯನ್ನು ಪರಿಕಿಸಿ, "ನೆರೆಯ ದೆಸೆಯಿಂದ ನಾಶವಾಗಿ ಹೋಗುತ್ತಿದ್ದ ಊರನ್ನು ತಮ್ಮ ಯೋಜನೆಯಲ್ಲಿ ಉಳಿಸಿರುವುದು ಮಾತ್ರವಲ್ಲದೆ, ವ್ಯರ್ಥವಾಗಿ ಹೋಗುತ್ತಾ, ಭಯೋತ್ಪಾದನೆಗೆ ಕಾರಣವಾಗಿದ್ದ ಮೂಸಾ ಮತ್ತು ಇಯಾಸಾ ನದಿಗಳ ನೀರು ಸದುಪಯೋಗವಾಗುವಂತೆ, ಹೈದರಾಬಾದಿನ ಸೌಂದರ್ಯವು ಹೆಚ್ಚುವಂತೆ ಕೊಟ್ಟಿರುವ ವಿಶ್ವೇಶ್ವ

ರಯ್ಯನವರ ಯೋಜನೆಯು ಅವರ ಕೀರ್ತಿಗೆ ಮೆರುಗು ಕೊಡುವಂತಿದೆ. ದಕ್ಷನಾದ ಇಂಜಿನಿಯರಿಂದ ಏನನ್ನು ನಿರೀಕ್ಷಿಸಬಹುದೋ, ಅವೆಲ್ಲವೂ ಇವರ ಯೋಜನೆಯಲ್ಲಿ ಅಡಕವಾಗಿದೆ. ನನಗಂತೂ ಯಾವ ದೋಷಗಳೂ ಕಂಡು ಬರುವುದಿಲ್ಲ. ಹೆಚ್ಚು ಮಾತನಾಡದೆ, ಕಾಲವಿಳಂಬ ಮಾಡದೆ ಯೋಜನೆಯನ್ನು ಕಾರ್ಯರೂಪಕ್ಕೆ ತರುವ ಪ್ರಯತ್ನ ಮಾಡುವುದೇ ಸರಿ, ಎಂದು ಬರೆದನು.

ಆದರೂ ಅಣೆಕಟ್ಟಿನ ಕೆಲಸವನ್ನು ಪ್ರಾರಂಭಿಸಲು ಮೂರು ವರುಷಗಳ ತಡವಾಯಿತು. ಅಷ್ಟು ಹೊತ್ತಿಗೆ ವಿಶ್ವೇಶ್ವರಯ್ಯನವರು ಮೈಸೂರಿನ ದಿವಾನ್ ಪದವಿಯನ್ನಲಂಕರಿಸಿದ್ದರು. ಮೂಸಾ ನದಿಯ ಅಣೆಕಟ್ಟಿನ ಅಸ್ತಿಭಾರಶಿಲಾ ಸ್ಥಾಪನೆಯನ್ನು ನಿಜಾಮರು ಮಾರ್ಚಿ ೧೯೧೩ ರಲ್ಲಿ ನೆರವೇರಿಸಿದಾಗ ಮರಾಮತ್ ಇಲಾಖೆಯ ಮುಖ್ಯಾಧಿಕಾರಿಗಳಾಗಿದ್ದ ಮೆಕನ್ಜಿಯವರು ನಿಜಾಮರಿಗೆ ಸಲ್ಲಿಸಿದ ವಿಜ್ಞಾಪನಾ ಪತ್ರಿಕೆಯಲ್ಲಿ ವಿಶ್ವೇಶ್ವಯ್ಯನವರಿಗೆ ಧನ್ಯವಾದಗಳನ್ನು ಅರ್ಪಿಸುತ್ತಾ ಈರೀತಿ ಹೇಳಿದರು:—

"ದಿವಂಗತ ನಿಜಾಮರ ಸಲಹೆಗಾರರು ಈ ಕೆಲಸಕ್ಕೆ ದಕ್ಷನಾದ ಅಧಿಕಾರಿಯನ್ನು ಆರಿಸುವುದರಲ್ಲಿ ತೋರಿದ ಜಾಣ್ಮೆ ಹೈದರಾಬಾದಿನ ಅದೃಷ್ಟವೆಂದೇ ಹೇಳಬೇಕು. ಭಾರತದ ಇಂಜಿನಿಯರುಗಳಲ್ಲಿ ಅತ್ಯಂತ ಪ್ರಭಾವಶಾಲಿಗಳಾದ, ಈಗ ಮೈಸೂರು ಸಂಸ್ಥಾನದ ದಿವಾನರಾಗಿರುವ ಮತ್ತು ಜೀವನದ ಯಾವ ರಂಗವನ್ನೇ ತುಳಿಯಲಿ ನಿಸ್ಸಂದೇಹವಾಗಿ ಅದರಲ್ಲಿ ಖ್ಯಾತಿಗಳಿಸಬಲ್ಲ ವಿಶ್ವೇಶ್ವರಯ್ಯನವರನ್ನು ಈ ಕೆಲಸಕ್ಕೆ ನಿಯೋಜಿಸಿದುದು ನಮ್ಮ ಭಾಗ್ಯವೇ ಸರಿ" ಎಂತಹ ಪ್ರಶಂಸೆ!

ನದೀ ಪ್ರವಾಹದಿಂದ ನಗರವನ್ನು ರಕ್ಷಿಸುವುದು ಮಾತ್ರವೇ ವಿಶ್ವೇಶ್ವರಯ್ಯನವರ ಕಾರ್ಯವಾಗಿರಲಿಲ್ಲ ನಗರ ನೈರ್ಮಲ್ಯ, ನಗರಾಭಿವೃದ್ಧಿ ಇವುಗಳ ಬಗ್ಗೆ ಸೂಕ್ತ ಸಲಹೆ ನೀಡುವುದೂ ಅವರ ಹೊಣೆಗಾರಿಕೆಯಾಗಿತ್ತು

ಮೊದಲೇ ತಿಳಿಸಿರುವಂತೆ ಮೂಸಾನದಿಯು ಹೈದರಾಬಾದು ಊರಿನ ಮಧ್ಯದಲ್ಲಿ ಹರಿಯುತ್ತದೆ. ನದಿಯ ಉಭಯ ಪಾರ್ಶ್ವಗಳಲ್ಲಿಯೂ ಊರು ಬೆಳೆದಿದೆ ಎಂದರೂ ತಪ್ಪಾಗದು. ಇದರಿಂದ ಒಂದು ದೃಷ್ಟಿಯಲ್ಲಾದರೂ ಜನರಿಗೆ ಅನುಕೂಲ! ಬಹಳ ಮನೆಗಳ ಬಚ್ಚಲ ರೊಚ್ಚು, ಊರಿನ ಮೋರಿಯ ನೀರು, ಕಶ್ಮಲ ಎಲ್ಲವೂ ನದಿಯ ಪಾಲು ದಕ್ಷಿಣ ಭಾರತದಲ್ಲಿ ನದಿಯ ಪಾತ್ರದಲ್ಲಿಯೇ ಜಲಮಲ ವಿಸರ್ಜನೆ ಮಾಡುವ ದುಷ್ಟ ಪದ್ಧತಿ ಹೆಚ್ಚು ವಾಡಿಕೆ ನದಿಯ ನೀರಿನ ಗತಿ ಏನು ?

ವಿಶ್ವೇಶ್ವರಯ್ಯನವರು ಹೈದರಾಬಾದಿನ ಸೊಬಗನ್ನು ತಮ್ಮ ಆತ್ಮ ಚರಿತೆಯಲ್ಲಿ ಬಹಳ ಮನರಂಜಕವಾಗಿ ಬಣ್ಣಿಸಿದ್ದಾರೆ "ಹೈದರಾಬಾದಿನಲ್ಲಿ ಕೊಚ್ಚೆ ನೀರೊಯ್ಯಲು ಆಗ ಮೋರಿಗಳೇ ಇರಲಿಲ್ಲ. ಸಂದಿ ಗೊಂದಿಗಳಲ್ಲಿದ್ದ ಮನೆಯ ಮಾಲಿಕರು ಮನೆಯ ಮುಂದೆ ಹಳ್ಳವನ್ನು ತೋಡಿ ಮನೆಯ ರೊಚ್ಚೆಲ್ಲವನ್ನೂ ಅದಕ್ಕೆ ಬಿಡುತ್ತಿದ್ದರು. ಮಳೆಗಾಲದಲ್ಲಿ ಹಳ್ಳ ತುಂಬಿ ರಸ್ತೆಯಲ್ಲಿ ಹರಿಯುವುದು; ಬೇಸಿಗೆಯಲ್ಲಿ ಒಣಗಿ ಸೊಳ್ಳೆಗಳು ಬೆಳೆಯುವುದಕ್ಕೆ ಬಹಳ ಅನುಕೂಲ. ಹೊಸಬರು ಯಾರಾದರೂ ಈ ಊರನ್ನು ನೋಡಲು ಬಂದರೆ " ಸೊಳ್ಳೆ ಸಾಕುವುದು " ಈ ಊರಿನ ಜನರಿಗೆ ಒಂದು ಕಸಬೆಂದು ಭಾವಿಸುವುದರಲ್ಲಿ ಆಶ್ಚರ್ಯವೇನು?

ಊರಿನ ರೊಚ್ಚನ್ನು ಹೊರಕ್ಕೆ ಸಾಗಿಸುವ ವಿಧಾನ; ಹೈದರಾಬಾದ್ ಮತ್ತು ಸಿಕಂದರಬಾದ್ ಈ ನಗರಗಳ ಸೌಂದರ್ಯವನ್ನು ಹೆಚ್ಚಿಸಲು ಟಾರ್ ಮತ್ತು ಸಿಮೆಂಟ್ ರಸ್ತೆಗಳ ಆಗತ್ಯ; ಒಳಚರಂಡಿ ವ್ಯವಸ್ಥೆ ; ತೋಟ, ಉದ್ಯಾನವನ, ಆಟದ ಬಯಲು ಇವುಗಳನ್ನು ನಿರ್ಮಿಸುವುದು ಈ ವಿಷಯಗಳಲ್ಲಿ ಸೂಕ್ತಯೋಜನೆ ಸಿದ್ಧಗೊಳಿಸಿ ಒಪ್ಪಿಸಿದರು. ಈ ಯೋಜನೆಗಳು ಸರಿಯಾಗಿ ಕಾರ್ಯಗತವಾಗದಿರಲು ೧೩ ವರುಷಗಳ ನಂತರ ಮೈಸೂರಿನ ದಿವಾನಗಿರಿಯಿಂದ ನಿವೃತ್ತರಾದಮೇಲೆ ೧೯೨೨ ರಲ್ಲಿ ಮತ್ತೆ ನಿಜಾಂ ಸರಕಾರದ ಕರೆಗೆ ಓಗೊಟ್ಟು ಹೈದರಾಬಾದಿಗೆ ಹೋಗಿ ಈ ಯೋಜನೆಗಳು ಸಮರ್ಪಕವಾಗಿ ಕೈಗೂಡುವಂತೆ ಮೇಲ್ವಿಚಾರಣೆ

ನಡೆಸಿದರು. ೧೯೩೧ ರ ವರೆಗೆ ಈ ಕೆಲಸಗಳಿಗೆ ಸುಮಾರು ಎರಡೂವರೆ ಕೋಟಿ ರೂಪಾಯಿಗಳ ವೆಚ್ಚವಾಗಿತ್ತು. ಇಂದು ಹೈದರಾಬಾದ್ ಮತ್ತು ಸಿಕಂದರಾಬಾದ್ ವಿಶಾಲವಾದ ಸಿಮೆಂಟ್ ಮತ್ತು ಟಾರ್ ರಸ್ತೆಗಳಿಂದಲೂ, ಭವ್ಯ ಸೌಧಗಳಿಂದಲೂ, ಮನೋಹರ ಉದ್ಯಾನವನಗಳಿಂದಲೂ, ಯಥೇಚ್ಛವಾದ ನೀರಿನಿಂದಲೂ, ವಿದ್ಯುತ್ ಪ್ರಕಾಶದಿಂದಲೂ ಹೊಳೆಯುತ್ತ ಭಾರತದ ಹಿರಿಯ ನಗರಗಳಲ್ಲಿ ಅತ್ಯಂತ ಶೋಭಾಯಮಾನವಾದ ನಗರವೆಂದು ಖ್ಯಾತಿಗಳಿಸಿದ್ದರೆ, ಅದಕ್ಕೆ ವಿಶ್ವೇಶ್ವರಯ್ಯನವರ ಇಂಜಿನಿಯರಿಂಗ್ ಸಾಮರ್ಥ್ಯ, ಕಲಾಕೌಶಲ್ಯ, ದೂರದೃಷ್ಟಿ ಕಾರಣವೆಂದು ಹೇಳಿದರೆ ಉತ್ಪ್ರೇಕ್ಷೆಯಾಗದು.

# ಮೈಸೂರಿನ ಛೀಫ್ ಇಂಜಿನಿಯರ್ ಮತ್ತು ದಿವಾನ್

ಬೊಂಬಾಯಿ ಸರಕಾರದ ನೌಕರಿಯಲ್ಲಿದ್ದು ಅಮೆರಿಕದ ಪ್ರವಾಸದಿಂದ ಆಗತಾನೆ ವಿಶ್ವೇಶ್ವರಯ್ಯನವರು ಸ್ವದೇಶಕ್ಕೆ ಹಿಂತಿರುಗಿದ್ದರು. ಅವರ ಶಕ್ತಿ ಸಾಮರ್ಥ್ಯಗಳನ್ನು ಗಮನಿಸಿದ್ದ, ಆಗಿನ ಮೈಸೂರಿನ ದಿವಾನರಾಗಿದ್ದ ವಿ. ಪಿ. ಮಾಧವರಾಯರು, ಇಂತಹ ಮಹನೀಯರ ಸೇವೆಯನ್ನು ಮೈಸೂರಿಗೆ ದೊರಕಿಸಿಕೊಳ್ಳಬೇಕೆಂಬ ಅಪೇಕ್ಷೆಯಿಂದ ಮೈಸೂರಿನ ಛೀಫ್ ಇಂಜನಿಯರ್ ಹುದ್ದೆಯನ್ನು ಸ್ವೀಕರಿಸುವಂತೆ ಏಪ್ರಿಲ್ ೧೯೦೯ ರಲ್ಲಿ ವಿಶ್ವೇಶ್ವರಯ್ಯನವರಿಗೆ ಪತ್ರ ಬರೆದರು ಇದಕ್ಕೆ ಮೊದಲೇ ಹೈದರಾಬಾದಿನ ಸೇವೆಯನ್ನು ವಿಶ್ವೇಶ್ವರಯ್ಯನವರು ಒಪ್ಪಿಕೊಂಡಿದ್ದರು. ಆದ್ದರಿಂದ ಮೈಸೂರಿನ ಆಮಂತ್ರಣವನ್ನು ಆಗ ಸ್ವೀಕರಿಸಲು ಸಾಧ್ಯವಾಗಲಿಲ್ಲ. ಇಷ್ಟರಲ್ಲಿಯೇ ಮಾಧವರಾಯರೂ ದಿವಾನ್ ಪದವಿಯಿಂದ ನಿವೃತ್ತರಾದರು. ಪ್ರಧಾನ ಶಿರೋಮಣಿ ಟಿ. ಆನಂದರಾಯರು ದಿವಾನರಾದರು.

ಈ ವೇಳೆಗೆ ಮೈಸೂರಿನ ಛೀಫ್ ಇಂಜನಿಯರಾಗಿದ್ದ ಮ್ಯಾಕ್ ಹಚಿನ್ ಅವರು ನಿವೃತ್ತರಾದರು. ಅವರ ಸ್ಥಾನಕ್ಕೆ ಹಂಗಾಮಿಯಾಗಿ ಕ್ಯಾಪ್ಟನ್ ಬರ್ನಾರ್ಡ್ ಡಾವೆ ನೇಮಿತರಾದರು ಆದರೆ ಈ ಸ್ಥಾನಕ್ಕೆ ಭಾರತೀಯರನ್ನೇ ನೇಮಿಸಬೇಕೆಂಬುದು ದೇಶ ಭಕ್ತರಾದ ದಿವಾನ್ ಆನಂದರಾಯರ ಆಸೆ. ಮಹಾರಾಜರ ಅಭಿಲಾಷೆಯೂ ಅದೇ. "ಮೈಸೂರಿನವರೇ ಆದ ತಾವು ಈ ಸ್ಥಾನವನ್ನು ಸ್ವೀಕರಿಸಬೇಕು. ತಮ್ಮ ಬುದ್ಧಿ ಶಕ್ತಿ ಉತ್ಸಾಹಗಳನ್ನು ವಿನಿಯೋಗಿಸಿ ನೀರಾವರಿ ಕೆಲಸಗಳನ್ನು ಕೈಗೊಳ್ಳಲು ತಮ್ಮ ಜನ್ಮ ಸ್ಥಳವಾದ ಮೈಸೂರಿನಲ್ಲಿ ತಮಗೆ ಸಾಕಷ್ಟು ಅವಕಾಶವಿದೆ" ಎಂದು ಶ್ರೀಮನ್ಮಹಾರಾಜರವರ ಹೆಸರಿನಲ್ಲಿ ದಿವಾನ್ ಆನಂದರಾಯರು ಮೆ, ೧೯೦೯ ರಲ್ಲಿ ವಿಶ್ವೇಶ್ವರಯ್ಯನವರಿಗೆ ಪತ್ರ ಬರೆದು ಸ್ವಾಗತಿಸಿದರು

ಈ ಕಾಗದಕ್ಕೂ ವಿಶ್ವೇಶ್ವರಯ್ಯನವರು ಒಮ್ಮೆಲೇ ಜಗ್ಗಲಿಲ್ಲ ಪಾಶ್ಚಿಮಾತ್ಯ ದೇಶಗಳಿಂದ ಆಗತಾನೆ ಹಿಂತಿರುಗಿದ್ದ ಅವರಿಗೆ ಮೈಸೂರನ್ನು

ಅಮೆರಿಕ, ಜಪಾನ್, ಕೆನಡ ದೇಶಗಳಂತೆ ಔದ್ಯೋಗಿಕ ರಾಜ್ಯವಾಗಿ ಮಾಡಬೇಕೆಂಬ ಉತ್ಕಟ ಅಭಿಲಾಷೆ ಆದರೆ ಇದಕ್ಕೆ ತಕ್ಕ ಅವಕಾಶ ದೊರಕುವುದೋ ಇಲ್ಲವೋ ಎಂಬ ಸಂಶಯ ಈ ಸಂಶಯ ನಿವಾರಣೆಗಾಗಿ ಕೈಗಾರಿಕೆಗಳನ್ನೂ ಕಲಾಶಿಕ್ಷಣವನ್ನೂ ಮೈಸೂರಿನಲ್ಲಿ ಅಭಿವೃದ್ಧಿಪಡಿಸಲು ತನಗೆ ಅವಕಾಶದೊರಕೀತೇ ಎಂದು ಪ್ರಶ್ನಿಸಿ ಕಾಗದ ಬರೆದರು ಶ್ರೀ ಮನ್ಮಹಾರಾಜರವರಿಂದ ಸೂಕ್ತ ಭರವಸೆ ದೊರೆಯಲು ೧೫ ನೇ ನವಂಬರ್ ೧೯೦೯ ರಲ್ಲಿ ಮೈಸೂರಿನ ಛೀಫ್ ಇಂಜಿನಿಯರ್ ಹಾಗೂ ಇಂಜಿನಿಯರಿಂಗ್ ಮತ್ತು ರೈಲ್ವೆ ಇಲಾಖೆಗಳ ಕಾರ್ಯದರ್ಶಿಗಳಾಗಿ ಅಧಿಕಾರ ವಹಿಸಿಕೊಂಡರು.

ವಿಶ್ವೇಶ್ವರಯ್ಯನವರು ಮೂರು ವರುಷ ಮೈಸೂರಿನಲ್ಲಿ ಛೀಫ್ ಇಂಜನಿಯರಾಗಿಯೂ, ಆರು ವರುಷ ದಿವಾನರಾಗಿಯೂ ಕೆಲಸ ಮಾಡಿ ಮೈಸೂರಿನ ಚರಿತ್ರೆಯನ್ನೇ ಪರಿವರ್ತಿಸಿ ಬಿಟ್ಟರು. ಅನೇಕ 'ಪ್ರಥಮ' ಸ್ಥಾನಗಳನ್ನು ಗಳಿಸಿರುವ ಸೌಭಾಗ್ಯ ಅವರದು. ಆಂಗ್ಲೇಯರಿಗೆ ಮೀಸಲಾಗಿದ್ದ ಅನೇಕ ಇಂಜಿನಿಯರ್ ಪದವಿಗಳು ಪ್ರಥಮವಾಗಿ ಇವರಿಗೆ ದೊರೆತವು. ಬೊಂಬಾಯಲ್ಲಿ ಮೊದಲನೇ ಭಾರತೀಯ ಸಫಾಯಿ ವಿಭಾಗದ ಇಂಜನಿಯರ್, ಮೈಸೂರಿನಲ್ಲಿ ಪ್ರಥಮ ಭಾರತೀಯ ಛೀಫ್ ಇಂಜನಿಯರ್, ಪ್ರಥಮ ಇಂಜನಿಯರ್-ದಿವಾನ್. ಸಾಮರ್ಥ್ಯವಂತರಾದ ಇಂಜಿನಿಯರೆಂದು ಮೈಸೂರಿಗೆ ಬರುವುದಕ್ಕೆ ಮೊದಲೇ ಇವರ ಖ್ಯಾತಿ ಭಾರತಾದ್ಯಂತ ಹರಡಿದ್ದರೂ, ಕೆರೆ, ಕಾಲುವೆ, ಕಟ್ಟೆ ಕಟ್ಟಿರುವ ಇಂಜನಿಯರು ರಾಜ್ಯಭಾರ ನಡೆಸಬಲ್ಲನೇ ಎಂದು ಅನೇಕರು ಶಂಕಿಸುತ್ತಿದ್ದರು. ಸರಕಾರದ ಆಡಳಿತ ನಿರ್ವಹಣದಲ್ಲಿ ಅನುಭವಪಡೆದ 'ಸಿವಿಲಿಯನ್' ಅಧಿಕಾರಿಗಳಿಗೆ ಮಾತ್ರ ಇದುವರೆಗೆ ಈ ಜವಾಬ್ದಾರಿಯ ಸ್ಥಾನ ಮೀಸಲಾಗಿತ್ತು. ಪರಂಪರೆಯಾಗಿ ಮೈಸೂರಿಗೆ ದಕ್ಷರಾದ ದಿವಾನರು ದೊರೆಯುತ್ತಾ ಬಂದದು ಅದರ ಸೌಭಾಗ್ಯ. ದಿವಾನ್ ರಂಗಾಚಾರ್ಲು ಅವರಿಂದ ಮೊದಲ್ಗೊಂಡು ಆನಂದ ರಾಯರವರೆಗೆ—ಸರ್ ಶೇಷಾದ್ರಿಅಯ್ಯರ್, ವಿ ಪಿ ಮಾಧವರಾವ್, ಹೀಗೆ ಒಬ್ಬರಿಗಿಂತ ಮತ್ತೊಬ್ಬರು ದಕ್ಷರು. ಹೀಗಿರುವಲ್ಲಿ ರಾಜ್ಯಭಾರದ ಅನುಭವವಿಲ್ಲದ ಒಬ್ಬ ಇಂಜಿನಿಯರ್ ದಿವಾನ್ ಪದವಿಗೆ ಏರುತ್ತಾನಲ್ಲ ಎಂದು

ಹಲವರು ನೌಕರರಿಗೆ ಸಂಕಟ. ಆದರೆ ವಿಶ್ವೇಶ್ವರಯ್ಯನವರು ಅರವತ್ತು ವರುಷ ಹಿಡಿಯುವ ಕೆಲಸವನ್ನು ಆರೇ ವರುಷಗಳ ಅವಧಿಯಲ್ಲಿ ಮುಗಿಸಿ, ನಿದ್ರಿಸುತ್ತಿದ್ದ ಮೈಸೂರನ್ನು ಮಾದರಿ ಮೈಸೂರು ಮಾಡಿ, ಈ ಶಂಕೆಯನ್ನು ನಿವಾರಿಸಿ ಜನಮನ್ನಣೆಗೆ, ವಿಶ್ವಖ್ಯಾತಿಗೆ ಪಾತ್ರರಾದರು.

ವಿಶ್ವೇಶ್ವರಯ್ಯನವರು ಮೈಸೂರಿಗೆ ಬಂದುದು ಧನಾರ್ಜನೆಯ ಆಸೆಯಿಂದಲ್ಲ. ಅವರು ಯಾವ ಮನೆಯನ್ನೂ ಕೊಂಡಿಲ್ಲ, ಭೂಮಿಯನ್ನೂ ಮಾಡಿಲ್ಲ. ಅವರು ಮಾಡಿರುವ ಕೆಲಸಗಳೇ ಅವರ ಶಾಶ್ವತ ಆಸ್ತಿ. ಅವರಿಗೆ ದಿವಾನ್ ಪದವಿ ದೊರೆತ ಸಂದರ್ಭದಲ್ಲಿ ಅವರು ಆಡಿದ ಮಾತು ಅವರ ಬಾಳಿನ ಗುಟ್ಟನ್ನು ತಿಳಿಸಿದೆ "ಸೇವೆಗೆ ಸಾಕಷ್ಟು ಅವಕಾಶ ದೊರೆತೀತೇ ಎಂಬ ನನ್ನ ಹಂಬಲ ಈಗ ಈಡೇರಿತು. ಇದಕ್ಕಿಂತ ಏನು ಬೇಕು ನನಗೆ? ನನಗೆ ಬೇಡ ಬಹುಮಾನ. ಹಲವು ವರುಷಗಳಕಾಲ ಶ್ರೀಮನ್ಮಹಾರಾಜರ ಹಾಗೂ ಈ ನಾಡಿನ ಸೇವೆ ಸಲ್ಲಿಸುವ ಸದವಕಾಶ ದೊರೆತಲ್ಲಿ ಅದೇ ಸಾಕು. ಪ್ರಜಾಹಿತವೇ ನನ್ನ ಚಿರಚಿಂತನೆ. ನನ್ನ ಸೇವೆ ಅವರ ಮೆಚ್ಚುಗೆಗೆ ಪಾತ್ರವಾಗುವುದಾದರೆ, ಅದಕ್ಕಿಂತ ಹೆಚ್ಚಿನ ಬಹುಮಾನ ನನಗೇನು ಬೇಕು?"

ಎಂತಹ ಮುಕ್ತಾಫಲ ಈ ಮಾತು! ಎಲ್ಲ ಮಹಾತ್ಮರ ಮನೋಗತವೂ ಒಂದೇ ಎಂಬುದಕ್ಕೆ ಸಂದೇಹವೇನು?

"ನತ್ವಹಂ ಕಾಮಯೇ ರಾಜ್ಯಂ, ನಸ್ವರ್ಗಂ, ನಾಽಪುನರ್ಭವಂ
ಕಾಮಯೇ ದುಃಖ ತಪ್ತಾನಾಂ ಪ್ರಣಿನಾಂ ಆರ್ತಿನಾಶನಂ"

ನನಗೆ ರಾಜ್ಯಬೇಡ. ಸ್ವರ್ಗಬೇಡ. ಮೋಕ್ಷವೂ ಬೇಡ. ನಾನು ಬಯಸುವುದು ದುಃಖದಿಂದ ಬೆಂದು ಬೇಯುವ ಪ್ರಾಣಿಗಳ ಸಂಕಟ ನಿವಾರಣ ಮಾಡುವ ಶಕ್ತಿ, ಹೀಗೆಂಬುವೇ ಮಹಾತ್ಮ ಗಾಂಧಿಯವರ ನಿತ್ಯದ ಪ್ರಾರ್ಥನೆಯಾಗಿತ್ತು.

ವಿಶ್ವೇಶ್ವರಯ್ಯನವರು ಮೈಸೂರಿಗೆ ಕಾಲಿಟ್ಟುದೇ ತಡ, ನಾಡಿಗೇ ಒಂದು ಹೊಸ ಜನ್ಮ ಬಂತು. ನಿದ್ರಾವಸ್ಥೆಯಲ್ಲಿದ್ದ ಮೈಸೂರು ವಿದ್ಯುದ್ವೇಗ

ದಿಂದ ಓಡತೊಡಗಿತು ಮೈಸೂರಿನ ಸಹಕಾರ ಸಂಘಗಳ ರಿಜಿಸ್ಟ್ರಾರಾಗಿದ್ದ ದಿವಂಗತ ಕೆ. ಹೆಚ್. ರಾಮಯ್ಯನವರು ಹೇಳುತ್ತಿದ್ದರು—“ ವಿಶ್ವೇಶ್ವರಯ್ಯನವರು ಎಕ್ಸ್‌ಪ್ರೆಸ್ ಇಂಜಿನ್ ನಾವೋ ಗ ಡ್ಸ್‌ಗಾಡಿ ಎತ್ತಿನಗಾಡಿಗೆ ಸಮ. ಆ ಇಂಜಿನ್ ಬಿಡದು. ಬೇಡ ಎಂದರೂ ಕೂಗೇಳಿಸಿ, ಹಬೆ ಏರಿಸಿ, ನಿದ್ರಿಸುತ್ತಿದ್ದವರನ್ನೂ ಎಳೆದುಕೊಂಡೇ ಹೋಗುತ್ತದೆ ”

ಮತ್ತೊಬ್ಬ ಲೇಖಕರು ಅವರ ಶಕ್ತಿಯನ್ನು ‘ ನಾಡಿನ ಹೊಲಸನ್ನೆಲ್ಲ ಹೊತ್ತು ದೂರ ಸಾಗಿಸಬೇಕೆಂಬ ಬಿರುಗಾಳಿ’ ಎನ್ನುತ್ತಾರೆ. ಭದ್ರಾವತಿ ಕಬ್ಬಿಣ ಕಾರ್ಖಾನೆಯ ಸಲಹೆಗಾರ ಇಂಜಿನಿಯರಾಗಿದ್ದ ಅಮೆರಿಕದ ಪೆರಿನ್ ಅವರು ವಿಶ್ವೇಶ್ವರಯ್ಯನವರನ್ನು ಕುರಿತು— “ ನಿಮ್ಮ ಚಾಟಿಯ ಏಟು ಜೀವವಿಲ್ಲದ ಕುದುರೆಯನ್ನೂ ಸಹ ಹೊಡೆದೆಬ್ಬಿಸಬಲ್ಲದು ” ಎಂದು ಹೇಳುತ್ತಿದ್ದರು. ಅಂಥ ಶಕ್ತಿ, ಅಂಥ ಚೇತನ ! ಶಕ್ತಿ ಸ್ವರೂಪಿ ಎನ್ನಬಹುದು ವಿಶ್ವೇಶ್ವರಯ್ಯನವರನ್ನು ಅವರಿಗೆ ಸೋಮಾರಿತನ ಕಂಡರಾಗದು ‘ಆಲಸ್ಯಂ ಅಮೃತಂ ವಿಷಂ’ ಆಲಸ್ಯದಿಂದ ಅಮೃತವೂ ವಿಷವಾದೀತು. ವಿಶ್ವೇಶ್ವರಯ್ಯನವರ ಅವಿಶ್ರಾಂತ ಕ್ರಿಯಾಶಕ್ತಿ, ಅಜೇಯ ಕಾರ್ಯೋತ್ಸಾಹ, ಅಪ್ರತಿಮ ಸಾಮರ್ಥ್ಯ ಎಲ್ಲಕ್ಕೂ ಮಿಗಿಲಾಗಿ ಜನ ಶಕ್ತಿಯಲ್ಲಿ ನಂಬಿಕೆ, ಇವಕ್ಕೆ ಎಣೆಯಿಲ್ಲ

“ ನಮ್ಮವರು ಕಷ್ಟಪಟ್ಟು ಮೈದಣಿಸಿ, ಕೆಲಸ ಮಾಡುವ ಜನವಲ್ಲ. ಯೂರೋಪಿಗಿಂತ ನಮ್ಮಲ್ಲಿ ದಿನಗೆಲಸದ ಅವಧಿ ಕಡಮೆ. ಬ್ರಿಟಿಷ್ ಭಾರತದಲ್ಲಿ ಇರುವುದಕ್ಕಿಂತ ಇಲ್ಲಿ ರಜಾ ದಿನಗಳು ಹೆಚ್ಚು ಸರಕಾರಿ ನೌಕರಿ ಅಪೇಕ್ಷಿಸುವವರ ಸಂಖ್ಯೆಯೇ ಅಧಿಕ. ಏಕೆಂದರೆ ಒಮ್ಮೆ ಸರಕಾರಿ ನೌಕರಿ ದೊರೆತರೆ, ಅವನು ದಡ್ಡನಿರಲಿ ಬುದ್ಧಿವಂತ ಇರಲಿ, ಮೈಗಳ್ಳನಿರಲಿ, ಮಹಾಚುರುಕಾದವನಿರಲಿ ಅವನ ಪಾಲಿಗೆ ಅನ್ನವೇನೋ ಶಾಶ್ವತ-ಭದ್ರ

ಶ್ರೀಯುತರ ಮಹಾಶತ್ರುಗಳೆಂದರೆ ಜಡತೆ, ಸೋಮಾರಿತನ. ನಮ್ಮ ದೇಶದ ಅತಿ ಘೋರ ವ್ಯಾಧಿ ಕ್ರಿಯಾಶೂನ್ಯತೆ, ಆಲಸತೆ, ಎಲ್ಲಕ್ಕೂ ಹಣೇ ಬರಹ ಎನ್ನುವ ನಿರ್ವೀರ್ಯ ಮನೋಧರ್ಮ. ಬೆಳಗಿನಿಂದ ರಾತ್ರಿಯ

ವರೆಗೆ ಅವಿಶ್ರಾಂತವಾಗಿ ಗಡಿಯಾರದಂತೆ ಕಾಲಕ್ಕೆ ಸರಿಯಾಗಿ ಕ್ರಮವರಿತು ದುಡಿಯುವರು. ದುಡಿಯುವುದರಲ್ಲಿ ಅವರಿಗೆ ಬೇಸರವೇ ಇಲ್ಲ. ದುಡಿದು ಕೆಟ್ಟವರಿಲ್ಲ ದುಡಿಯದೆ ತುಕ್ಕು ಹಿಡಿದು ಸಾಯುವುದಕ್ಕಿಂತ ದೇಹವನ್ನು ದಣಿಸಿ, ತೇಯಿಸಿ ಸಾಯುವುದೇ ಲೇಸು ಎಂಬುದು ಅವರ ಜೀವನ ಧರ್ಮ. ದಿನಕ್ಕೆ ೧೨ ರಿಂದ ೧೪ ಗಂಟೆಗಳ ಕಾಲ ದುಡಿಯುವುದು ಅವರ ದಿನಚರಿ ದುಡಿಮೆಯಲ್ಲಿಯೇ ಅವರಿಗೆ ಸಂತೋಷ, ಅದರಲ್ಲಿಯೇ ಆನಂದ. ದುಡಿದು ಸಾಕಾಯಿತು, ಸ್ವಲ್ಪ ಆಟ ವಾಡೋಣ, ವಿನೋದವಾಗಿ ಸ್ವಲ್ಪ ಕಾಲಕಳೆಯೋಣ ಎಂಬುದಿಲ್ಲ ಅವರಲ್ಲಿ. 'ದುಡಿಮೆಯೇ ಆನಂದ' ಎನ್ನುವವರಿಗೆ ಪ್ರತ್ಯೇಕ ಮನರಂಜನೆಯ ಕಾರ್ಯಕ್ರಮವೇಕೆ? "ಉಸಿರು ನಿಲ್ಲುವ ಕ್ಷಣದಲ್ಲಿಯೂ ಕೂಡ ದುಡಿಯುತ್ತಿರಬೇಕು. ಉಳಿದೆಲ್ಲ ಆಸೆಗಳಿಗಿಂತ ಹೆಚ್ಚಿನ ಆಸೆ, ನನ್ನ ಕಟ್ಟಕಡೆಯ ಬಯಕೆ ಇದು" ಎಂದು ಹೇಳುತ್ತಾರೆ.

ನೌಕರಿಗೆ ಕಾಲಿಟ್ಟ ಮೊದಲಿನಿಂದಲೂ ಆಂಗ್ಲೇಯರ ಸಂಪರ್ಕದಲ್ಲಿ ಕೆಲಸಮಾಡಿ, ಪಾಶ್ಚಿಮಾತ್ಯ ದೇಶಗಳಲ್ಲಿ ಹೆಚ್ಚಾಗಿ ಪ್ರವಾಸಮಾಡಿ ವಿಶ್ವೇಶ್ವರಯ್ಯನವರಿಗೆ ಪಾಶ್ಚಾತ್ಯರ ಕ್ರಮವೂ, ರೀತಿಯೂ ಬಹು ಮೆಚ್ಚಿಗೆ ಯಾಗಿದ್ದುವು. ಕಾಲಕಾಲಕ್ಕೆ ಗೊತ್ತಾದ ಕೆಲಸ ಐದು ಘಂಟೆಗೆ ವಿಶ್ವೇಶ್ವರಯ್ಯನವರು ಸಭೆಗೆ ಬರುತ್ತಾರೆ ಎಂದರೆ, ಐದು ಘಂಟೆ ಐದು ನಿಮಿಷವೂ ಅಲ್ಲ, ಐದು ಹೊಡೆಯುತ್ತಿದ್ದಾಗಲೇ ಅವರು ಸಭೆಯಲ್ಲಿ ಕಾಲಿಡುವರು. ನಮ್ಮ ಗಡಿಯಾರವಾದರೂ ಹಿಂದೆ ಮುಂದೆ ಹೋದೀತು, ಅವರು ಮಾತ್ರ ಕಾಲಮೀರಿ ಬಂದದ್ದೇ ಇಲ್ಲ ಅನೇಕರು ಅವರು ಬಂದಕಾಲ ನೋಡಿ ತಮ್ಮ ಗಡಿಯಾರದ ಮುಳ್ಳನ್ನು ಸರಿಪಡಿಸಿಕೊಳ್ಳುವರು. ತೊಂಭತ್ತು ತುಂಬಿದ ಈ ವಯಸ್ಸಿನಲ್ಲೂ ಹಾಗೆಯೇ.

# ಅನನ್ಯ ಚಿಂತೆ

ಸರ್ ಕೆ. ಶೇಷಾದ್ರಿ ಅಯ್ಯರವರ ಕಾಲದಲ್ಲೇ ಮೈಸೂರಿನಲ್ಲಿ ಮೊಟ್ಟ ಮೊದಲು ವಿದ್ಯುಚ್ಛಕ್ತಿ ಉತ್ಪನ್ನವಾದರೂ ಅದರ ಬಳಕೆ ಹೆಚ್ಚಾಗಿರಲಿಲ್ಲ. ಚಿನ್ನದ ಗಣಿಗಳಿಗಾಗಿಯೇ ವಿದ್ಯುಚ್ಛಕ್ತಿಯ ಉತ್ಪನ್ನ ಮೊದಲಾಗಿ ಅವರು ಮಾತ್ರವೇ ಅದರ ಪ್ರಯೋಜನವನ್ನು ಹೆಚ್ಚಾಗಿ ಪಡೆಯುತ್ತಿದ್ದರು ಆಗ ಮಾರೀಕಣಿವೆಯೇ ಅತ್ಯಂತ ದೊಡ್ಡ ಜಲಾಶಯ. ವಿದ್ಯೆಯಲ್ಲಿ, ಕೈಗಾರಿಕೆಯಲ್ಲಿ ಮೈಸೂರು ತೀರ ಹಿಂದೆ. ಜನರಲ್ಲಿ ಆಕಾಂಕ್ಷಾ ಶೂನ್ಯ ನಿರುತ್ಸಾಹ. ಸಂಘಟಿತ ಪ್ರಯತ್ನವಿಲ್ಲ, ಸಾಕಷ್ಟು ಹಣವಿಲ್ಲ ದೇಶದ ಅಭಿವೃದ್ಧಿಯನ್ನು ನಿಯತಯೋಜನೆಯಂತೆ ನಡೆಸಿಕೊಂಡು ಬರಬೇಕೆಂಬ ಹಂಬಲ, ಕ್ರಿಯಾತ್ಮಕಶಕ್ತಿ ಹಿರಿಯ ನಾಯಕರಲ್ಲೂ ಇರಲಿಲ್ಲ.

೧೯೧೧ ರಲ್ಲಿ ಜನಸಂಖ್ಯೆ ೫೮,೦೬,೧೯೩ ಸರಕಾರದ ವಾರ್ಷಿಕ ಆದಾಯ ೧೯೧೦-೧೧ ರಲ್ಲಿ ೨೪೭ ಲಕ್ಷ ರೂಪಾಯಿ, ವ್ಯಯ ೨೩೩ ಲಕ್ಷ. ಇದನ್ನು ಇಂದಿನ ಸಂಖ್ಯೆಗಳೊಡನೆ ತಾಳೆ ಹಾಕಿ ನೋಡಿ.

ವಿಶ್ವೇಶ್ವರಯ್ಯನವರು ದಿವಾನ್ ಪದವಿಯನ್ನು ಸ್ವೀಕರಿಸಿ ಅಕ್ಟೋಬರ್ ೧೯೧೨ ರಲ್ಲಿ ಪ್ರಜಾಪ್ರತಿನಿಧಿ ಸಭೆಯಲ್ಲಿ ಮಾಡಿದ ಭಾಷಣವು ಆಗಿನ ಪರಿಸ್ಥಿತಿಯನ್ನು ಚೆನ್ನಾಗಿ ಚಿತ್ರಿಸುತ್ತದೆ:—

"ಇಲ್ಲಿ ಹದಿನಾರು ಜನರಲ್ಲಿ ಒಬ್ಬನಿಗೆ ಮಾತ್ರ ಓದು ಬರಹ ಬರುತ್ತದೆ. ಮಳೆ ಸರಿಯಾಗಿ ಆದ ಕಾಲದಲ್ಲೂ ರೈತರಿಗೆ ವರ್ಷ ಪೂರ್ಣ ಕೈತುಂಬ ಕೆಲಸವಿಲ್ಲ. ಮಳೆ ಇಲ್ಲದ ಕಾಲದಲ್ಲಂತೂ ಅನೇಕ ತಿಂಗಳು ಉದ್ಯೋಗವೇ ಇಲ್ಲ; ನಿರಾಶೆ. ನಮ್ಮಲ್ಲಿ ಶೇಕಡ ೭೫ ಜನ ವ್ಯವಸಾಯವನ್ನೇ ನಂಬಿದ್ದಾರೆ. ನಮ್ಮಲ್ಲಿ ಬಹುಜನ ಗ್ರಾಮವಾಸಿಗಳು. ತಮ್ಮ ಮನೆಯ ವ್ಯವಹಾರಬಿಟ್ಟು ಅವರಿಗೆ ಬೇರೆ ಉದ್ಯೋಗವಿಲ್ಲ, ಆಸೆ ಆಕಾಂಕ್ಷೆಗಳಿಲ್ಲ ಹಿಡುವಳಿಗಳು ಕಿರಿದು; ವ್ಯಾಪಾರೋದ್ಯಮಗಳೂ ಸಣ್ಣ ಪುಟ್ಟವರ ಕೈಯಲ್ಲಿ. ದೊಡ್ಡ ಪ್ರಮಾಣದ ವ್ಯಾಪಾರವಿಲ್ಲ, ಕೈಗಾರಿಕೆಯಿಲ್ಲ. ತನ್ನ ಪಾಡಿಗೆ ತನ್ನ

ವ್ಯಾಪಾರ, ತನ್ನ ಉದ್ಯಮ, ಸಹಕಾರ, ಸಂಘಟನೆ ವ್ಯವಸ್ಥೆ ಸಮಾಜದ ಹಿರಿಯರಲ್ಲಿಯೂ ವ್ಯಾಪಕವಾಗಿಲ್ಲ.

"ವ್ಯವಸಾಯದ ಜೊತೆಗೆ ಕೈಗಾರಿಕೆಯೂ ಬೆಳೆಯದಿದ್ದರೆ ಯಾವ ದೇಶವೂ ಅಭಿವೃದ್ಧಿಯಾಗದು. ಪ್ರಪಂಚವೆಲ್ಲವೂ ಪ್ರಗತಿ ಪಥವನ್ನು ಹಿಡಿದು ಮುಂಬರಿಯುತ್ತಿರುವಾಗ ೩೦ ಕೋಟಿ ಭಾರತೀಯರು ೨೦೦೦ ವರುಷಗಳ ಹಿಂದಿನ ನಾಗರಿಕತೆಯನ್ನೇ ನಂಬಿ ಕೇವಲ ಉದರಂಭರಣದಲ್ಲೇ ತೃಪ್ತರಾಗಿ, ಕ್ಷಾಮವೋ ಏನಾದರೂ ವಿಷಮ ಸ್ಥಿತಿಯೋ ತಲೆದೋರಿದರೆ ತಡೆದುಕೊಳ್ಳಲು ಶಕ್ತಿಯಿಲ್ಲದೆ ಹುಳುಗಳಂತೆ ನಾಶವಾಗುವ ದೀರ್ಘ ನಿದ್ರಾವಸ್ಥೆಯಲ್ಲೇ ಬಿದ್ದಿರಲು ಸಾಧ್ಯವಾಗದು, ಎಂದು ೧೮೭೮ ರಲ್ಲಿಯೇ ದಿವಾನ್ ರಂಗಾಚಾರ್ಲು ಹೇಳಿದ್ದಾರೆ.

"೩೦ ವರುಷಗಳ ಹಿಂದೆ ಅವರು ನುಡಿದ ವಾಕ್ಯ ಇಂದಿಗೂ ಅನ್ವಯಿಸುತ್ತದೆ. ಪರಿಸ್ಥಿತಿಯನ್ನು ಬದಲಾಯಿಸಲು ಸಾಕಷ್ಟು ಪ್ರಯತ್ನ ಪಡದೆ ಹೋದರೆ, ೩೦ ವರುಷಗಳ ಅನಂತರವೂ ಈ ವಾಕ್ಯಗಳು ನಿಜವೆನಿಸಿಕೊಳ್ಳುತ್ತವೆ.

"ನಮ್ಮ ಜನರ ಜೀವನ, ಶಕ್ತಿಸಾಮರ್ಥ್ಯಗಳು ವೃದ್ಧಿಯಾಗಬೇಕು. ಅವರಲ್ಲಿ ಸ್ವಶಕ್ತಿ, ಸ್ವಸಹಾಯಶೀಲತೆ, ಕಾರ್ಯತತ್ಪರತೆ, ಉದ್ಯಮಪ್ರಿಯತೆ, ಹಳೆಯದನ್ನು ಬಿಟ್ಟು ಹೊಸತನ್ನು ಸ್ವೀಕರಿಸುವ ಧೈರ್ಯ, ಸಹಕಾರ ಮನೋಭಾವ, ಕ್ರಿಯಾತ್ಮಕ ಶಕ್ತಿ ಬೆಳೆಸಬೇಕು."

೧೯೧೫ ರಲ್ಲಿ ಇತ್ತ ಇನ್ನೊಂದು ಭಾಷಣದಲ್ಲಿ ಅವರು ದೇಶದ ಪರಿಸ್ಥಿತಿಯನ್ನು ಕಂಡು ಈ ರೀತಿ ಸಂಕಟಪಟ್ಟಿದ್ದಾರೆ.

"ಅತ್ಯಂತ ಪುರಾತನವಾದ ಕೃಷಿಯೇ ನಮ್ಮ ಜನರ ಮುಖ್ಯ ವೃತ್ತಿ. ಇದರಿಂದ ತಲೆಗೆ ಸರಾಸರಿ ಉತ್ಪನ್ನ ರೂ. ೩೧. ಕೆನಡಾದಲ್ಲಿ ಸರಾಸರಿ ಉತ್ಪನ್ನ ರೂ. ೧೧೧೦, ಆಸ್ಟ್ರೇಲಿಯದಲ್ಲಿ ೬೨೧.

"ವಿಜ್ಞಾನ, ಕುಶಲತೆ, ದಕ್ಷತೆ ಇವುಗಳ ಸಹಾಯದಿಂದ ನಿರ್ಮಿತವಾಗುವ ಸರಕುಗಳೆಲ್ಲವನ್ನು ನಾವು ಪರದೇಶದಿಂದ ತರಿಸಿಕೊಳ್ಳುತ್ತೇವೆ.

ಇದಕ್ಕೆ ಪ್ರತಿಯಾಗಿ, ನಮ್ಮ ಜನಕ್ಕೆ ಸಾಕಷ್ಟು ಹೊಟ್ಟೆಗಿಲ್ಲವೆಂಬ ಚಿಂತೆಯೇ ಇಲ್ಲದೆ ಆಹಾರವನ್ನೂ ಕಚ್ಚಾ ಪದಾರ್ಥಗಳನ್ನೂ ಹೊರಕ್ಕೆ ರಫ್ತು ಮಾಡುತ್ತೇವೆ.

"ದೇಶದ ಐಶ್ವರ್ಯವನ್ನು ಹೆಚ್ಚಿಸಲು ನಾಡಿನ ಅಪಾರವಾದ ನೈಸರ್ಗಿಕ ಐಶ್ವರ್ಯವನ್ನಾಗಲಿ, ವ್ಯಕ್ತಿಗಳ ಗುಪ್ತ ಬುದ್ಧಿ ಶಕ್ತಿಯನ್ನಾಗಲಿ, ಸರಿಯಾಗಿ ಕೃಷಿಮಾಡುತ್ತಿಲ್ಲ.

"ಕೆಳದರ್ಜೆಯ ಕೈಗಾರಿಕೆ, ಕೆಳದರ್ಜೆಯ ಶಿಕ್ಷಣ, ಸ್ವಲ್ಪಗಳಿಕೆ, ಅಲ್ಪ ತೃಪ್ತಿ, ಸಹಕಾರಮನೋಭಾವದ ಅಭಾವ. ಮಹತ್ವಾಕಾಂಕ್ಷೆಯಿಲ್ಲ; ಅದನ್ನು ತುಂಬಿಕೊಳ್ಳುವ ಪ್ರಯತ್ನ ಮೊದಲೇ ಇಲ್ಲ ನಮಗೂ ಮುಂಬರಿದ ದೇಶಗಳಿಗೂ ಅಜಗಜಾಂತರ ವ್ಯತ್ಯಾಸ. ಈ ಲೋಕದಲ್ಲಿ ಯಾವುದು ಪ್ರಗತಿ, ಯಾವುದು ಅಭಿವೃದ್ಧಿ ಎನಿಸಿಕೊಳ್ಳುತ್ತದೆಯೋ ಅವೆಲ್ಲವೂ ಶೂನ್ಯ ನಮ್ಮಲ್ಲಿ.

"ಕೀಳು ಮಟ್ಟದ ಜೀವನದಲ್ಲಿ ಅಪಾಯ ಹುದುಗಿದೆ ಎಂಬುದು ಅನುಭವ ಸಿದ್ಧ. ದುಷ್ಕಾಲಕ್ಕೆ ಇದರಿಂದ ನೆರವಾಗದು. ಕಾಲಕಾಲಕ್ಕೆ ಮಳೆಯಾದೀತೋ ಇಲ್ಲವೋ ಎಂಬ ಭೀತಿ ನಮ್ಮನ್ನು ಸದಾಪೀಡಿಸುತ್ತಿರುತ್ತದೆ. ಒಂದೆರಡು ಹದ ಮಳೆ ತಪ್ಪಿದರೆ, ಅದರಿಂದ ಎಷ್ಟೋ ಜನಕ್ಕೆ ತೊಂದರೆ ಮಳೆಯೇ ಆಗದೆ ಹೋದರಂತೂ ನಮ್ಮ ಸಂಕಟ ಹೇಳತೀರದು ಅನೇಕ ಸಾವುಗಳೂ ಸಂಭವಿಸಬಹುದು. ಮಳೆಮೋಡವನ್ನೇ ಅವಲಂಬಿಸಿರುವ ಬಡ ಜನಕ್ಕೆ ಮಿತವ್ಯಯದ ಜೀವನ ನಡೆಸುವ ಶಿಕ್ಷಣ ಕೊಡಬೇಕು. ಮೂರು ನಾಲ್ಕು ವರುಷಗಳ ಸತತ ದುಡಿಮೆ ಫಲವಾಗಿ ಒಂದೆರಡು ವರುಷಗಳ ಸಂಕಟ ದೆಸೆಯಿಂದ ಹೇಗಾದರೂ ಪಾರಾಗಬಹುದು. ದುಡಿಮೆಗೆ ದೇಶದಲ್ಲಿ ಹೇರಳವಾಗಿ ಅವಕಾಶವಿದೆ; ಅದಕ್ಕೆ ಒಳ್ಳೆಯ ಪ್ರತಿಫಲವಿದೆ. ಅಭಾವದ ದಿನಗಳ ದುಃಖದಿಂದ ಪಾರಾಗಲು, ದೇಹ ದಂಡಿಸಿ ದಂಡಿಸಿ ದುಡಿಯುವುದಕ್ಕಿಂತ ಉತ್ತಮ ವಿಮೆ ಇದೆಯೆ ? ಹೆಚ್ಚು ಕಾಲ ದುಡಿಯುವ ಅಭ್ಯಾಸ, ನಮ್ಮ ಜನಮಾಡಬೇಕು. ಕೈಗಾರಿಕೆ, ವಾಣಿಜ್ಯ, ವ್ಯಾಪಾರ ಇವುಗಳಲ್ಲಿ ಹೆಚ್ಚು ಆಸಕ್ತಿ ವಹಿಸಬೇಕು ಇವನ್ನೆಲ್ಲ

ನಡೆಸಿದರೆ ಅನ್ಯ ದೇಶದಲ್ಲಿ ಕ್ಷಾಮ ಭೀತಿಯು ಹೇಗೆ ದೂರವಾಗಿದೆಯೋ ಇಲ್ಲಿಯೂ ಹಾಗೇ ಆದೀತು"

ವ್ಯಾಧಿಗ್ರಸ್ತನನ್ನು ಗುಣಪಡಿಸಿ, ಅವನನ್ನು ಆರೋಗ್ಯವಂತನಾಗಿಯೂ ದೃಢಕಾಯನಾಗಿಯೂ ಮಾಡಬೇಕಾದರೆ ಮೊದಲು ಅವನ ವ್ಯಾಧಿ, ವ್ಯಾಧಿಗೆ ಕಾರಣ ಇವುಗಳನ್ನು ಅರಿಯಬೇಕು. ರೋಗಿಯ ಲಕ್ಷಣಗಳಿಂದ ವೈದ್ಯನು ರೋಗದ ನಿರ್ಧರ ಮಾಡುತ್ತಾನೆ. ತದನಂತರ ಔಷಧಗಳಿಂದ ರೋಗವನ್ನು ಪರಿಹರಿಸುತ್ತಾನೆ. ಆಮೇಲೆ ದೇಹಪುಷ್ಟಿಗೆ, ದೃಢಕಾಯಕ್ಕೆ ಗಮನ. ದೇಶದ ವಿಷಯದಲ್ಲೂ ಹಾಗೇ.

ವಿಪುಲವಾದ ದೈವದತ್ತ ನೈಸರ್ಗಿಕ ಐಶ್ವರ್ಯದಿಂದ ತುಂಬಿದ ನಮ್ಮ ನಾಡು, ಸುಜಲಾಂ ಸುಫಲಾಂ ಆದ. ನಮ್ಮ ಪುಣ್ಯಭೂಮಿ, ಅನ್ಯರಾಷ್ಟ್ರಗಳಿಗಿಂತ ವಿದ್ಯೆ, ವ್ಯಾಪಾರ, ವಾಣಿಜ್ಯ, ಕೈಗಾರಿಕೆ, ಸಂಪದಭಿವೃದ್ಧಿಗಳಲ್ಲಿ ತೀರ ಹಿಂದುಳಿದಿರಲು ಕಾರಣವೇನು ? ಇವುಗಳನ್ನು ಪರಿಹರಿಸಿ ನಮ್ಮ ನಾಡನ್ನು ಅಮೆರಿಕ, ಕೆನಡಾ, ಜಪಾನ್‌ಗಳಂತೆ ಪ್ರಗತಿಪರ ರಾಷ್ಟ್ರವಾಗಿ, ಸುಖಶಾಂತಿಮಯವಾಗಿ ಹೇಗೆ ಮಾಡುವುದು ಎಂಬುದೇ ವಿಶ್ವೇಶ್ವರಯ್ಯನವರ ಅನನ್ಯ ಚಿಂತೆ. ಈ ಕಡು ಬಡತನದ ವ್ಯಾಧಿಯನ್ನು ಹೋಗಲಾಡಿಸಲು ವಿಶ್ವೇಶ್ವರಯನವರಿಗಿದ್ದ ಚಿಂತೆಯನ್ನು ಅವರ ಭಾಷಣ, ಲೇಖನಗಳಿಂದ ಅವರು ಬರೆದಿರುವ ಅನೇಕ ಪುಸ್ತಕಗಳಿಂದ, ಅವರ ಸಂತತ ಅವಿಶ್ರಾಂತ ಪ್ರಯತ್ನಗಳಿಂದ, ಅವರ ಜೀವನದಿಂದ ಅರಿಯ ಬಹುದಾಗಿದೆ

# ನಮ್ಮ ವ್ಯಾಧಿಗಳು

ಭಾರತೀಯನ ಸರಾಸರಿ ವರಮಾನವು ಉಳಿದ ಎಲ್ಲ ರಾಷ್ಟ್ರಗಳ ಜನಕ್ಕಿಂತ ಕಡಮೆಯಾಗಿರಲು ಮೊದಲನೆ ಮುಖ್ಯ ಕಾರಣ ವಿದ್ಯಾವಿಹೀನತೆ. ಇದನ್ನು ಎಷ್ಟು ಬಾರಿ ಒತ್ತಿಹೇಳಿದರೂ ಸಾಲದು. ಜನತೆಯಲ್ಲಿ ಸಾಕಷ್ಟು ದಕ್ಷತೆಯಲ್ಲಿರುವುದಕ್ಕೆ ಮತ್ತೊಂದು ಮುಖ್ಯ ಕಾರಣ ಕ್ರಮಬದ್ಧವಾದ ದಿನಚರಿಯ ಅಭ್ಯಾಸದ ಅಭಾವ.

ನಮ್ಮ ಜನರ ಜೀವನ ಕ್ರಮದ ಆಧಾರ ಧಾರ್ಮಿಕ. ಅಪ್ಪ ನೆಟ್ಟ ಆಲದ ಮರ ಎಂದು ಅನೂಚಾನವಾಗಿ ನಡೆದುಬಂದ ಪದ್ಧತಿಯನ್ನು, [illegible] ಮುಚ್ಚಿ ಅನುಸರಿಸುವ ಅಂಧ ಶ್ರದ್ಧೆ, ಸಂಪ್ರದಾಯವಾದ, ಸೋಮಾ[illegible] ಬೆಳಗಿನಿಂದ ಸಂಜೆಯುವರಿಗೆ, ಸಂಜೆಯಿಂದ ರಾತ್ರಿಯವರಿಗೆ ಕೆಲಸಕ್ಕೆ [illegible] ಮಾತುಗಳಲ್ಲಿ ವೃಥಾ ಕಾಲಹರಣ ಮಾಡುವುದು ನಮ್ಮ ಸ್ವಭಾವ. [illegible] ಬರಹ, ಪ್ರಾಚೀನಕರ್ಮ ಎಂಬ ನಿರಾಶಾವೃತ್ತಿ ನಾವು ಆಶಾ[illegible]ಲ್ಲಿ ಹೆಚ್ಚು ದುಡಿಯುಬೇಕು, ಚೆನ್ನಾಗಿ ಬಾಳಿ ಬದುಕಬೇಕು ಎಂಬ ಆಕಾಂಕ್ಷೆಯಿಲ್ಲ. ಇಹ ಜೀವನ, ಪರಲೋಕಕ್ಕೆ ಒಂದು ಸೋಪಾನ. ಇಹಲೋಕದ ಸುಖವು ಕ್ಷಣಿಕ, ಅಶಾಶ್ವತ ಎಂಬ ವಿರಕ್ತ ಮನೋಭಾವ. ಆದರೂ ನಾಗರಿಕಯುಗದ ಪಾಶ್ಚಾತ್ಯ ಜೀವನ ಕ್ರಮವನ್ನು ಅನುಸರಿಸಬೇಕೆಂಬ ಅಪೇಕ್ಷೆ. ಹಳೆಯುದರಲ್ಲಿ ಹಂಬಲು, ಹೊಸದರಲ್ಲಿ ಆಸೆ. ಹಳೆಯ ಸಂಪ್ರದಾಯವನ್ನು ಬಿಡರು ಹೊಸದನ್ನು ಮನಃ ಪೂರ್ವಕವಾಗಿ ಅನುಸರಿಸರು. ತ್ರಿಶಂಕುವಿನ ಗತಿ. ಜೀವನದಲ್ಲಿ ನಿರುತ್ಸಾಹ ಏನೋ ಕಾಲ ಕಳೆದರಾಯ್ತು ಎಂಬ ಗೆಲುವಿಲ್ಲದ ಪೌರುಷ ಜೀವನ. ಜನಭರಿತವಾದ ಪೋಟಾ ಪೋಟಿಯ ಪ್ರಪಂಚದಲ್ಲಿ ಸುಖ ಜೀವನ ನಡೆಸುವುದೇ ಅವನಿಗೆ ಕಷ್ಟವಾಗುತ್ತಿದೆ. ಆದರೆ ಈ ನಿರುತ್ಸಾಹದ ಜೀವನವನ್ನು ಧೈರ್ಯದಿಂದ ಪ್ರತಿಭಟಿಸಿ ಕಾರ್ಯೋನ್ಮುಖನಾಗುವುದಕ್ಕೆ ಪ್ರತಿಯಾಗಿ

ಈ ಹಣೇಬರಹದ ಮನೋಭಾವನೆ ಅವನನ್ನು ಮತ್ತಷ್ಟು ಹತಾಶನನ್ನಾಗಿಯೂ ಪರಾಜಯ ಮನೋಭಾವನೆಯುಳ್ಳವನಾಗಿಯೂ ಮಾಡುತ್ತದೆ.

ಕೆಲಸಂದರ್ಭಗಳಲ್ಲಿ ಏಕ ಕುಟುಂಬ ಪದ್ಧತಿಯು ಸೋಮಾರಿಗಳ ಸಂಖ್ಯೆಯನ್ನು ಹೆಚ್ಚಿಸಲು ಸಹಕಾರಿಯಾಗಿದೆ. ಹಲವು ಸಂದರ್ಭಗಳಲ್ಲಿ ಸಂಸಾರದ ಯಜಮಾನನು ತನ್ನ ಆಶ್ರಯದಲ್ಲಿ ಬೆಳೆಯುವ ಸೋಮಾರಿಗಳ ಸಂಖ್ಯೆಗೆ ಹೆಮ್ಮೆ ಪಡುತ್ತಾನೆ. ಇಷ್ಟು ಜನರ ಉದರಪೋಷಣೆ ನಾನು ನಡೆಸುತ್ತೇನೆಂಬ ಅಹಂಭಾವ. ಸಂಸಾರ ನಡೆಸುವ ಯಜಮಾನ ಕಣ್ಣು ಮುಚ್ಚಿದರೆ ಅನೇಕ ಸಂದರ್ಭಗಳಲ್ಲಿ ಸಂಸಾರವೇ ಒಡೆದು ನಾಶವಾಗಿ ಆಶ್ರಿತರು ದಿಕ್ಕಿಲ್ಲದೆ ಭಿಕ್ಷಾಟನೆ ಮಾಡಬೇಕಾಗಿ ಬಂದಿರುವ ನಿದರ್ಶನಗಳೂ ನಮ್ಮಲ್ಲಿ ವಿರಳವಲ್ಲ. ಸಮಾಜವು ಇಂಥಾ ಅನರ್ಥಗಳಿಗೆ ಎಡೆಗೊಡದಂತೆ ಸಾಕಷ್ಟು ಮುನ್‌ಜಾಗ್ರತೆ ಕ್ರಮಗಳನ್ನು ಕೈಗೊಳ್ಳಬೇಕು.

ಭಿಕ್ಷಾಟನೆಯನ್ನು ಜರ್ಪಾನ್ನಲ್ಲಿರುವಂತೆ ಶಿಕ್ಷಾರ್ಹವಾಗಿ ಮಾಡಬೇಕು. ಅಂಗವಿಕಲರಿಗೆ, ಕುಂಟ ಕುರುಡರಿಗೆ, ಹುಚ್ಚರಿಗೆ ಸಂಸಾರ ಅಥವಾ ಸ್ಥಳೀಯ ಸಂಸ್ಥೆಗಳು ತಕ್ಕ ಅನುಕೂಲ ಮಾಡಬೇಕು. ಅದರಲ್ಲಿಯೂ ವಿಶೇಷವಾಗಿ ನಿರ್ಗತಿಕ, ಅನಾಶ್ರಿತ ಮಕ್ಕಳಿಗೆ ಅವರ ಬೆಳವಣಿಗೆಗೆ ತಕ್ಕ ವ್ಯವಸ್ಥೆ ಮಾಡುವುದು ಅತ್ಯಗತ್ಯ. ಶಾಲೆಗಳಲ್ಲಿ ಮಕ್ಕಳ ಮತ್ತು ವಿದ್ಯಾರ್ಥಿಗಳ ವೈದ್ಯ ಪರೀಕ್ಷೆ ಆಗಾಗ ನಡೆಯುತ್ತಿರಬೇಕು. ಸಣ್ಣ ಮಕ್ಕಳ ದೇಹಪುಷ್ಟಿಗೆ ಅಗತ್ಯವಾದ ಹಾಲು, ಆಹಾರ ಇವುಗಳನ್ನು ಒದಗಿಸಿ ಅವರಿಗಾಗಿಯೇ ಪ್ರತ್ಯೇಕ ಶಿಶುವಿಹಾರ ಮತ್ತು ಆಸ್ಪತ್ರೆಗಳನ್ನು ತೆರೆಯುವುದರಲ್ಲಿ ಹೆಚ್ಚು ಪ್ರಯೋಜನವುಂಟು.

ನಮ್ಮವರಿಗೆ ಬಾಳ್ವೆಯೇ ದುಃಖಕರವಾದರೆ, ಪಾಶ್ಚಿಮಾತ್ಯರು ಅದರಲ್ಲಿಯೇ ಸುಖವನ್ನೂ ಸಂತೋಷವನ್ನೂ ಕಾಣುತ್ತಾರೆ. ನಮ್ಮಂತೆ ಅವರಿಗೆ ಜೀವನವು ಜಡವಾಗಿ ತೋರದು ಆದ್ದರಿಂದಲೇ ಅವರು ಸದಾ ಲವಲವಿಕೆಯಿಂದಿರುತ್ತಾರೆ. ಆದ್ಯಂತವಿಲ್ಲದೆ ಈ ಪ್ರಪಂಚವನ್ನು ದಿನ ದಿನಕ್ಕೂ ಉತ್ತಮಗೊಳಿಸುತ್ತಾ ಬರಬಹುದು ಎಂಬುದೇ ಅವರ ನಂಬಿಕೆ ವ್ಯಕ್ತಿ ಮತ್ತು ಸಾಮೂಹಿಕ ಪ್ರಯತ್ನದಲ್ಲಿ ಅವರಿಗೆ ಅಮಿತ ಶ್ರದ್ಧೆ.

ಭಾರತದ ಪ್ರಗತಿಗೆ ಅದರ ಜಾತಿ ಪದ್ಧತಿ ಮತ್ತೊಂದು ಘೋರ ಅಡಚಣೆ. ಕೀಳು ಜನರು, ಅಸ್ಪೃಶ್ಯರು ಎಂದು ಕರೆಯಲಾಗುವ ಜನರ ವಿಷಯದಲ್ಲಿ ಸಮಾಜವು ಬಹಳ ಕ್ರೂರತನದಿಂದ ವರ್ತಿಸುತ್ತಿದೆ. ಮಾನವ ಪ್ರೇಮ, ದಯೆ ದಾಕ್ಷಿಣ್ಯ ಎಂಬುದೇ ಇಲ್ಲ, ಅವರ ವಿಷಯದಲ್ಲಿ ಅವರ ನೆರಳೂ ಸಹ ಅಪವಿತ್ರವೆಂದು ಭಾವಿಸುತ್ತಾರೆ. ಗುಲಾಮರಿಗಿಂತ ಕಡೆಯಾಗಿ ಅವರನ್ನು ಕಾಣುತ್ತಾರೆ ಅವರು ನಿಸ್ಸಹಾಯರು, ಅವರಿಗೆ ವಿದ್ಯೆಯ ಗಂಧವೇ ಇಲ್ಲ.

ಈ ಮಾತುಗಳನ್ನು ವಿಶ್ವೇಶ್ವರಯ್ಯನವರು ನುಡಿದಿರುವುದು ೫೦ ವರುಷಗಳ ಹಿಂದೆ! 'ಹರಿಜನ' ಎಂಬ ಪದ ಇನ್ನೂ ಆಗ ಸೃಷ್ಟಿಯಾಗಿರಲಿಲ್ಲ ಎಷ್ಟು ದೂರದೃಷ್ಟಿ ಅವರದು!

ಉತ್ತರದಿಂದ ಬಂದ ಆರ್ಯರು, ದಕ್ಷಿಣದ ಕಂದು ಬಣ್ಣದ ದ್ರಾವಿಡರೊಡನೆ ಬೆರಕೆಯಾಗಲು ಬಯಸದೆ ಈ ಜಾತಿ ಪದ್ಧತಿಯನ್ನು ಆಚರಣೆಗೆ ತಂದಿರಬೇಕೆಂದು ವಿಶ್ವೇಶ್ವರಯ್ಯನವರು ವಾದಿಸುತ್ತಾರೆ. ಇದಕ್ಕೆ ಆಧಾರವಿಲ್ಲದಿಲ್ಲ ವರ್ಣ ಸಂಕರವಾಗಬಾರದು ಎಂಬುವುದೇ ಆರ್ಯರ ಪ್ರತಿಷ್ಠೆ. ವರ್ಣ ಎಂಬ ಪದವೇ ಇದಕ್ಕೆ ಸಾಕ್ಷಿ. ಮೊದಲು ವರ್ಣ, ಆಮೇಲೆ ಉದ್ಯೋಗ, ತದನಂತರ ಹುಟ್ಟು, ಈ ಭೇದಗಳು ಕ್ರಮೇಣ ಆರ್ಯರಲ್ಲಿ ತಲೆದೋರಿರಬೇಕು. ಆತ್ಮರಕ್ಷಣೆ, ದೈವ ಪೂಜೆಗಳೂ ಈ ಪ್ರತ್ಯೇಕತಾ ಭಾವನೆಗೆ, ಒಡಕಿಗೆ ಸಾಹಾಯಕವಾದುವು

"ಕಾರಣ ಏನೇ ಇರಲಿ ನಮ್ಮ ಬದುಕು ಬಾಳ್ವೆಯಲ್ಲಿ, ದಿನಚರಿಯಲ್ಲಿ ಜಾತಿಯು ಬಹು ದೊಡ್ಡ ಪಾತ್ರವಹಿಸುತ್ತದೆ. ಜಾತಿ ಕಟ್ಟಳೆಯನ್ನು, ಜಾತಿ ಪದ್ಧತಿಯನ್ನು ಅನುಸರಿಸಿ ನಡೆಯುವುದರಲ್ಲಿಯೇ ನಮ್ಮ ಆಯುಷ್ಯದ ಎಷ್ಟೋ ಕಾಲ ವ್ಯರ್ಥವಾಗಿ ಹೋಗುತ್ತದೆ. ಅದರಿಂದ ಪ್ರಗತಿಗೂ ಅಡ್ಡ. ನಮ್ಮ ಜನಸಂಖ್ಯೆಯಲ್ಲಿ ಬಹು ದೊಡ್ಡಭಾಗ ದೇಶಾಭ್ಯುದಯ ಕಾರ್ಯಗಳಲ್ಲಿ ಭಾಗವಹಿಸಲು ಅವಕಾಶವಿಲ್ಲದಂತೆ ಮಾಡಿದೆ, ಈ ಅಸ್ಪೃಶ್ಯತೆ ಈ ಘೋರ ಪಾಪಕ್ಕೆ ತಕ್ಕ ಪರಿಹಾರವಾಗಲೇಬೇಕು.

"ಎಡಗೈ-ಬಲಗೈ, ಹಿಂದೂ-ಮುಸ್ಲಿಂ, ತೊರೆಯ-ಪಂಚಮ ಈ ಭಿನ್ನತೆಗಳು ದೇಶದ ಪ್ರಗತಿಗೆ ದೊಡ್ಡ ಕಂಟಕಗಳಾಗಿವೆ. ಒಂದೊಂದು ಜಾತಿಗೂ ಒಂದೊಂದು ಪ್ರತ್ಯೇಕಶಾಲೆ, ಪ್ರತ್ಯೇಕವಾದ ಕುಡಿಯುವ ನೀರಿನ ಬಾವಿ ಒಂದೊಂದು ಜಾತಿಗೂ ಒಂದೊಂದು ಬಾವಿ ತೋಡಲು ಹಣ ಎಲ್ಲಿಂದ ತರುವುದು ? ಮುಸ್ಲಿಮರಿಗೆ ಪ್ರತ್ಯೇಕಶಾಲೆ ' ಬೇಕಂತೆ ! ಅಲ್ಲದೆ ಅವರ ಹೆಣ್ಣುಮಕ್ಕಳ ಶಾಲೆಗೆ ಮಹಿಳಾ ಇನ್ಸ್‌ಪೆಕ್ಟರೇ ಬೇಕಂತೆ !

"ಪೂರ್ವ-ಪಶ್ಚಿಮ ದೇಶಗಳಲ್ಲಿ ನಾನು ಸಾಕಷ್ಟು ಪ್ರವಾಸ ಮಾಡಿದ್ದೇನೆ ಆದರೆ, ಈ ಕೃತಕ ಭೇದವನ್ನು ಅರ್ಥವಿಲ್ಲ ಹಾಸ್ಯಾಸ್ಪದ ದೂರಕ್ಕೆ ಒಯ್ದಿರುವ ನಿದರ್ಶನ ಇನ್ನೆಲ್ಲೂ ನಾನು ನೋಡಲಿಲ್ಲ

"ನಮ್ಮ ವಿವಾಹ ಪದ್ಧತಿಯೂ ಪ್ರಗತಿಗೆ ಮತ್ತೊಂದು ಬಾಧಕ ಜಾತಿ-ಉಪಜಾತಿಯಲ್ಲೇ ಮದುವೆಯಾಗಬೇಕು. ಹೀಗಾಗಿ ಅನೇಕ ಸಂದರ್ಭಗಳಲ್ಲಿ ಸರಿ ಜೋಡಿಯಾದ ವಧೂ-ವರರೇ ಸಿಗುವುದಿಲ್ಲ. ಸ್ವಜಾತಿಯಲ್ಲಿ ಸರಿಯಾದ ಹೆಣ್ಣು ದೊರೆಯದೆ, ಹೆಣ್ಣು ಹುಟ್ಟುವವರೆಗೆ ಕಾಯಬೇಕಾಗಿ ಬಂದ ನಿದರ್ಶನಗಳೂ ಇವೆ ! ಮುದುಕರು ಎಳೆಯ ವಯಸ್ಸಿನ ಹುಡುಗಿಯರನ್ನು ಮದುವೆ ಯಾಗುವುದಕ್ಕೆ ಇದೇ ಕಾರಣ. ಹತ್ತಿರ ಸಂಬಂಧದಲ್ಲಿ ಪ್ರಾಪ್ತ ವಯಸ್ಕರಾಗುವುದರೊಳಗಾಗಿಯೇ ಮದುವೆಯಾಗುವುದರಿಂದ ಹುಟ್ಟುವ ಮಕ್ಕಳು ದಷ್ಟಪುಷ್ಟರಾಗಿರುವುದಿಲ್ಲ ಇದರಿಂದ ಸಂತತಿ ಕ್ಷೀಣಿಸುತ್ತಾ ಬರುತ್ತದೆ. ವಿಧವೆಯರ ಸಂಖ್ಯೆಯೂ ಅಧಿಕವಾಗುತ್ತಿದೆ.

"ಎಳೆಯ ವಯಸ್ಸಿನ ವಿಧವೆಯರು ಲಕ್ಷಗಟ್ಟಲೆಯಲ್ಲಿದ್ದರೂ, ಅನಾರೋಗ್ಯ ಪುಷ್ಟಿಕರ ಆಹಾರದ ಅಭಾವ ಈ ಕೊರತೆಗಳಿದ್ದರೂ, ಪ್ರಜೋತ್ಪತ್ತಿಯು ಮಾತ್ರ ಇತರ ರಾಷ್ಟ್ರೋತ್ಪತ್ತಿಗಳಿಗಿಂತ ತೀವ್ರಗತಿಯ ಲ್ಲಿ ನಡೆಯುತ್ತಿದೆ.

"ವಿವಾಹ, ಉಪನಯನ, ಜನನ, ಮರಣ ಮೊದಲಾದುವುಗಳಿಗೆ ನಿರ್ಬಂಧವಾಗಿ ಶಕ್ತಿಮೀರಿ ವೆಚ್ಚಮಾಡುವುದು ಮತ್ತೊಂದು ದುಷ್ಟ

ಪದ್ಧತಿ. ಮದುವೆಗಾಗಿ ಮಾಡಿದ ಸಾಲ ತೀರಿಸಿ ಋಣ ಮುಕ್ತರಾಗಲು ಅನೇಕರಿಗೆ ಸಾಧ್ಯವಾಗುವುದಿಲ್ಲ. ವೆಚ್ಚಗಳು ಮಿತಿಯಲ್ಲಿರಬೇಕು

"ಹೆಣ್ಣು ಮಕ್ಕಳ ಶಿಕ್ಷಣದ ಕಡೆ ನಮಗೆ ಸಾಕಷ್ಟು ಗಮನವಿಲ್ಲ. ಅವರು ಸಮಾಜದಲ್ಲಿ ಮುಂದೆ ಬಂದು ಸ್ವಾವಲಂಬಿಗಳಾಗುವ ಅವಕಾಶವೇ ಇಲ್ಲ. ಸ್ತ್ರೀಯರು ಪರಾವಲಂಬಿಗಳಾಗಿರಬೇಕೆಂಬುದು ಅನೂಚಾನವಾಗಿ ನಡೆದು ಬಂದಿರುವ ಪದ್ಧತಿ. ಮನೆಗೆಲಸವೇ ಅವರ ಹಣೆಬರಹ. ಪರದಾ ಅಥವ ಘೋಷಾ ಪದ್ಧತಿಯು ಸ್ತ್ರೀಯರು ಸಮಾಜದಿಂದ ಪ್ರತ್ಯೇಕವಾಗಿರುವಂತೆ ಬಲವಂತ ಪಡಿಸುತ್ತದೆ."

"ನನ್ನ ಅತ್ತಿಗೆಯನ್ನು ರೈಲ್ವೆ ಸ್ಟೇಷನ್ನಲ್ಲಿ ನೋಡಿದರೆ, ಆಕೆಯನ್ನು ಗುರುತಿಸುವುದು ನನಗೆ ಸಾಧ್ಯವಾಗದು" ಎಂದು ಉತ್ತರ ದೇಶದಲ್ಲಿ ಪರದಾ ಪದ್ಧತಿಯನ್ನು ಆಚರಿಸುತ್ತಿದ್ದ ಒಬ್ಬ ಅತಿಥಿ ವಿಶ್ವೇಶ್ವರಯ್ಯನವರಿಗೆ ತಿಳಿಸಿದನಂತೆ!

ಸ್ತ್ರೀಯರ ವಿಷಯದಲ್ಲಿ ಅವರಿಗೆ ಅದೆಷ್ಟು ಅನುಕಂಪ! ಒಂದು ಸಣ್ಣ ಕುಟುಂಬದಲ್ಲಿಯೂ ಬೆಳಗಿನಿಂದ ರಾತ್ರಿಯವರೆಗೆ ಮಲಗುವವರೆಗೆ, ಅಡಿಗೆ ಮಾಡುವುದು, ಬಡಿಸುವುದು, ಗೋಮೆ ಇಡುವುದು, ಪಾತ್ರೆ ತಿಕ್ಕುವುದು ಇವರಲ್ಲಿಯೇ ಸ್ತ್ರೀಯ ಅರ್ಧ ಜೀವನ ಕಳೆದುಹೋಗುತ್ತದೆ. ಆಧುನಿಕ ಪದ್ಧತಿಗಳನ್ನನುಸರಿಸುವುದರಿಂದ ಕೆಲವು ಗಂಟೆಗಳಲ್ಲಿಯೇ ಅಡಿಗೆ ಮಾಡಿ ಮುಗಿಸಬಹುದು. ಇವೆಲ್ಲವನ್ನೂ ಶಾಲೆಯಲ್ಲಿ ಕಲಿಸಬೇಕು, ಎನ್ನುತ್ತಾರೆ

ನಮ್ಮ ಜನರು ತಮ್ಮ ಶಕ್ತಿ ಸಾಮರ್ಥ್ಯಗಳನ್ನು, ದೇಶದ ಐಶ್ವರ್ಯವನ್ನು ಅನೇಕ ವಿಧಗಳಲ್ಲಿ ಪೋಲು ಮಾಡುತ್ತಿದ್ದಾರೆ. ಬೇಸಾಯ ವರುಷದಲ್ಲಿ ಆರೇಳು ತಿಂಗಳ ಕೆಲಸ ಒದಗಿಸುತ್ತದೆ. ಮಿಕ್ಕ ಕಾಲವೆಲ್ಲ ಕೆಲಸವಿಲ್ಲದೆ ವ್ಯರ್ಥವಾಗಿ ಪೋಲಾಗುತ್ತದೆ. ವಿದ್ಯಾವಂತರ ಸಂಖ್ಯೆ ನೂರಕ್ಕೆ ಆರು; ಆದ್ದರಿಂದ ತೊಂಬತ್ತುನಾಲ್ಕು ಜನರ ಬುದ್ಧಿಸಾಮರ್ಥ್ಯ ಅಜ್ಞಾನದಿಂದ ಪೋಲಾಗುತ್ತಿದೆ.

ನಾಗರೀಕ ಜನರ ವಿಶಾಲ ಅನುಭವದಿಂದ ಲಾಭ ಪಡೆಯದ ಮೌಢ್ಯ ದಿಂದ ಪೋಲು. ನಾಗರೀಕತೆಯು ನಿತ್ಯ ವ್ಯವಹಾರಿಕ ಜೀವನವನ್ನು ಸರಿಯಾಗಿ ಗ್ರಹಿಸದೆ, ವ್ಯಾಪಾರ ಧರ್ಮವನ್ನು ಅನುಷ್ಠಾನಕ್ಕೆ ತಾರದೆ ಅರಬರೆ ತಿಳುವಳಿಕೆಯಿಂದ ಪೋಲು. ಹಳ್ಳಿಯ ಹರಟೆ, ಜಾತಿಗಳ ಜಗಳ ಅನವಶ್ಯಕ ವಿವಾದಗಳಿಂದ ಬುದ್ಧಿ ಶಕ್ತಿಯ ಪೋಲು. ಉತ್ಪಾದನಾ ಕಾರ್ಯಗಳಿಗೆ ಹಣವನ್ನು ಕೊಡದೆ, ಕುಡಿಕೆಗಳಲ್ಲಿ ಕೂಡಿಡುವುದರಿಂದ ಹಣ ಪೋಲು. ನಮ್ಮ ಜನರು ಸಾಮಾನ್ಯವಾಗಿ ನೀತಿವಂತರಾಗಿಯೇ ಬಾಳುತ್ತಾರೆ. ಆದರೂ ಆತ್ಮ ಗೌರವ, ದೇಹ ದಾರ್ಢ್ಯಗಳಿಗೆ ಅಗತ್ಯವಾದ ಆರೋಗ್ಯ ನಿಯಮಗಳ ಅಲ್ಪ ವಿಚಾರಗಳಿಗೂ ಗಮನ ಕೊಡದೆ ಇಳಿ ವಯಸ್ಸಿನಲ್ಲೇ ವೃದ್ಧರಾಗಿ ಆರೋಗ್ಯ ಪೋಲು. ಸಾಮರಸ್ಯ, ಸಹಕಾರ ಎಲ್ಲರೂ ಒಂದೇ ಎಂಬ ವಿಶಾಲ ಭಾವನೆ, ಐಕ್ಯತೆಗಳ ಅಭಾವದಿಂದಾಗು ತ್ತಿರುವ ಪೋಲು, ಮೇಲೆ ಸೂಚಿಸಿದ ಎಲ್ಲ ಪೋಲುಗಳನ್ನೂ ಮೀರಿದುದು.

ಇದಲ್ಲದೆ ಇತರರಲ್ಲಿರುವ ಉತ್ತಮ ಗುಣಕ್ಕೆ ನಮ್ಮಲ್ಲಿ ಮಾತ್ಸರ್ಯ ಬೇರೆ. ಉತ್ತಮ ಕೆಲಸಕ್ಕೆ, ಗುಣಕ್ಕೆ ತಕ್ಕ ಪ್ರೋತ್ಸಾಹ ನೀಡಬೇಕು, ಬೆನ್ನು ತಟ್ಟಬೇಕು. ನಮ್ಮಲ್ಲಿ ನೂತನ ಉದ್ಯಮಗಳನ್ನು ಕೈಗೊಳ್ಳಲು ಜನರು ಮುಂದೆ ಬಾರರು ಉದ್ಯಮಶೀಲತೆಯ ಕೊರತೆ ಬಹಳ. ಅಲ್ಪ ಲೋಪಗಳನ್ನು ಆನೆಯ ಗಾತ್ರವಾಗಿ ಮಾಡಿ ಟೀಕಿಸುವುದರಿಂದ ಸಾರ್ವ ಜನಿಕ ಸೇವೆಗೆ ತೊಡಗುವ ಆಸಕ್ತಿಯುಳ್ಳವರೂ ಮುಂದೆ ಬರಲು ಹಿಂತೆಗೆಯುತ್ತಾರೆ.

# ಕರ್ಮಯೋಗಿ

ಇದು ನಮ್ಮ ನಾಡಿನ ಚಿತ್ರ. ವಿಶ್ವೇಶ್ವರಯ್ಯನವರು ದಿವಾನರಾಗಿದ್ದಾಗಿನ ಕಾಲದ ಚಿತ್ರ. ಆಗ ಮೈಸೂರು ಹಾಗಿತ್ತು. ಮೈಸೂರೇಕೆ, ಸುಮಾರಾಗಿ ಹಿಂದೂಸ್ತಾನವೇ ಹಾಗಿತ್ತು. ಇಂತಹ ಭಾರತವನ್ನು ಹಾಲ್ಜೇನು ಹರಿವ ನಾಡಾಗಿ ಮಾಡಬೇಕು ಎಂಬುದೇ ಅವರ ಕನಸು. ಅಂಧಕಾರವನ್ನು ತೊಲಗಿಸಿ, ದಾರಿದ್ರ್ಯವನ್ನು ಹೊಡೆದೋಡಿಸಿ, ನಮ್ಮ ದೇಶವನ್ನು ಜಪಾನ್, ಕೆನಡಾ, ಆಸ್ಟ್ರೇಲಿಯಗಳಂತೆ ಮಾಡಬೇಕು ಎಂಬುದು ಅವರ ಜೀವನದ ಹೆಬ್ಬಯಕೆ.

೧೯೦೯ ರಲ್ಲಿ ಮೈಸೂರಿಗೆ ಛೀಫ್ ಇಂಜಿನಿಯರಾಗಿ ಬಂದವರು ೧೯೧೮ ರಲ್ಲಿ ದಿವಾನ್ ಅಧಿಕಾರದಿಂದ ತಾವಾಗಿ ನಿವೃತ್ತರಾದಾಗ—"ಈ ಎಲ್ಲ ವರುಷಗಳಲ್ಲಿಯೂ ಸರ್ ಎಂ ವಿಶ್ವೇಶ್ವರಯ್ಯನವರು ದೇಶದ ಆರ್ಥಿಕ ಪ್ರಗತಿಗಾಗಿ ಏಕ ಮನಸ್ಸಿನಿಂದ, ದಣಿವರಿಯದ ಸಂತತ ಉತ್ಸಾಹದಿಂದ ಶ್ರಮಿಸಿರುತ್ತಾರೆ. ಅವರು ದಿವಾನರಾಗಿ ಮಾಡಿರುವ ಕೆಲಸದಿಂದ ಶಿಕ್ಷಣ, ವ್ಯವಸಾಯ, ರೈಲ್ವೆ, ವಹಿವಾಟು, ಕೈಗಾರಿಕೆಗಳಲ್ಲಿ ಬಹಳ ಪರಿಣಾಮಕಾರಿಯಾದ ಪ್ರಗತಿಯಾಗಿದೆ. ಇದರಿಂದ ರಾಜ್ಯದ ಪ್ರಗತಿ ಮತ್ತು ಭವಿತವ್ಯಕ್ಕೆ ಸುಭದ್ರ ತಳಹದಿ ಹಾಕಿದಂತಾಗಿರುತ್ತದೆ" ಎಂದು ಶ್ರೀ ಕೃಷ್ಣರಾಜ ಒಡೆಯರವರು ಮುಕ್ತ ಕಂಠದಿಂದ ಹೊಗಳಿದರು.

ನಮ್ಮ ದೇಶ ಹಿಂದುಳಿದಿದ್ದರೂ ನಮ್ಮ ಜನ ಬುದ್ಧಿ ಶಕ್ತಿಯಲ್ಲಿ ಯಾರಿಗೂ ಕಡೆಯಿಲ್ಲ. ತಕ್ಕ ಶಿಕ್ಷಣ, ಯೋಗ್ಯ ವಾತಾವರಣ, ಬೇಕಾದ ಸೌಲಭ್ಯಗಳನ್ನು ಕಲ್ಪಿಸಿಕೊಟ್ಟರೆ ಪರದೇಶಿಗಳನ್ನೂ ಮೀರಿಸಬಲ್ಲ ಶಕ್ತಿ ನಮ್ಮ ಜನಕ್ಕಿದೆ ಎಂಬ ದೃಢವಿಶ್ವಾಸ. ಅವಿಶ್ರಾಂತವಾಗಿ ತಾವು ದುಡಿಯುವುದು ಮಾತ್ರವಲ್ಲದೆ ಇತರರಿಂದಲೂ ಕೆಲಸ ತೆಗೆಸಿಕೊಳ್ಳುವ ಪ್ರೇರಕಶಕ್ತಿ, ಪ್ರಚೋದನಾಶಕ್ತಿ ಅಪಾರವಾದುದು. ಇವರ ಪ್ರೇರಕಶಕ್ತಿ ದೇಶವನ್ನೇ ತ್ವರೆಪಡಿಸಿತು. ಸಂಸ್ಥಾನದ ಗಾಳಿಯಲ್ಲಿ ತ್ವರೆತುಂಬಿ ತೀವಿತು,

ಮುಂಬೈ ಪ್ರಾಂತದಲ್ಲಿ ಬಹುಕಾಲ ಆಂಗ್ಲೇಯ ಅಧಿಕಾರಿಗಳ ಜೊತೆಯಲ್ಲಿ ಒಡನಾಡಿ, ಪಾಶ್ಚಾತ್ಯ ದೇಶಗಳಲ್ಲಿ ಬಹಳವಾಗಿ ತಿರುಗಾಡಿ ಇವರಿಗೆ ಪಾಶ್ಚಾತ್ಯ ಕ್ರಮವೂ, ರೀತಿಯೂ, ನಿಯಮಶೀಲತೆಯೂ ಬಹು ಮೆಚ್ಚಿಗೆಯಾಗಿದ್ದುವು. ನಿಯತ ಕಾರ್ಯಕ್ರಮವನ್ನಿಟ್ಟುಕೊಂಡು ಚಾಚೂತಪ್ಪದೆ ಅದರಂತೆಯೇ ನಡೆಯುವರು. ತಾವು ಆ ರೀತಿ ಕ್ಷಣ ಮೀರದೆ ಹೊತ್ತಿಗೆ ಸರಿಯಾಗಿ ನಡೆಯುವುದಲ್ಲದೆ, ಇತರರಲ್ಲಿಯೂ ಅದೇ ಗುಣವನ್ನು ನಿರೀಕ್ಷಿಸುವರು. ಅಧಿಕಾರಿಗಳು ಗೊತ್ತಾದ ಕ್ರಮದಂತೆ ಕಾರ್ಯಮಾಡಿ ತೋರಿಸಬೇಕು. ನಿಯತ ಕಾರ್ಯವನ್ನು ವಾರ ವಾರವೂ, ತಿಂಗಳು ತಿಂಗಳೂ, ವರ್ಷ ವರ್ಷವೂ ಪರಿಶೀಲಿಸಬೇಕು, ವರದಿಮಾಡಬೇಕು. ಇಲಾಖಾ ಅಧಿಕಾರಿಗಳು ವಾರದಲ್ಲಿ ಗೊತ್ತಾದ ಒಂದು ದಿನ ಅವರನ್ನು ನೋಡಬೇಕು. ತಾವು ಮಾಡಿರುವ ಕೆಲಸ, ಮಾಡಲಾಗದ ಕೆಲಸ ಎಲ್ಲ ವನ್ನೂ ಚಾಚೂತಪ್ಪದೆ ವರದಿ ಮಾಡಬೇಕು. ಯಾರೇ ಆಗಲಿ ಗೊತ್ತಾದ ಕಾಲಕ್ಕೆ, ನಿಮಿಷಕ್ಕೆ ಸರಿಯಾಗಿ ಬರಬೇಕು. ಹೊತ್ತಿಗೆ ಮುಂಚೆ ಬಂದರೆ, 'ನಾನು ನಿಮ್ಮನ್ನು ಕಾಣಲು ಇನ್ನೂ ಸಿದ್ಧನಿಲ್ಲ' ಎನ್ನುವರು. ಹೊತ್ತು ಮೀರಿ ಬಂದರೆ— 'ನಿಮಗಾಗಿ ಕಾದಿದ್ದೇನೆ' ಎನ್ನುವರು. ಇಂಥಾ ಕಾಲ ನಿಯಮದ ಮಹಾವ್ಯಕ್ತಿ ನನಗಾಗಿ ಕಾದಿರುವರಲ್ಲಾ; ಕಾಯುವಂತೆ ಮಾಡಿದೆನಲ್ಲಾ ಎಂದು ತಡವಾಗಿ ಬಂದವನು ತಾನೇ ಪರಿತಾಪ ಪಡಬೇಕು. ತೊಂಬತ್ತು ತುಂಬಿದರೂ ಈಗಲೂ ಅದೇ ಕ್ರಮ, ಅಷ್ಟೇ ನಿಯತ ನಿಯಮ.

ಪಾಶ್ಚಿಮಾತ್ಯ ದೇಶದ ವೇಷ ಭೂಷಣಗಳಲ್ಲಿಯೂ ವಿಶ್ವೇಶ್ವರಯ್ಯ ನವರಿಗೆ ಪ್ರೇಮ ಮೈಸೂರು ಸೀಮೆಯಲ್ಲಿ ಕಾಲರ್, ಟೈ. ಹ್ಯಾಟ್, ಸೂಟ್, ಬೂಟ್ ಮೊದಲಾದ ಯೂರೋಪಿಯನ್ ಪದ್ಧತಿಯ ಉಡಿಗೆ ತೊಡಿಗೆ ಅವರ ಕಾಲದಲ್ಲಿ ವಿಶೇಷವಾಗಿ ಪ್ರಚಾರಕ್ಕೆ ಬಂದಿತು. ಹಿಂದೂ ಗಳಲ್ಲಿ ಕ್ಷೌರಮಾಡಿಕೊಳ್ಳುವುದಕ್ಕೆ ದಿನ ವಾರ ತಿಥಿ ನಕ್ಷತ್ರ ನೋಡುವುದು ಪದ್ಧತಿ. ಅಧಿಕಾರಿಗಳು ಪಾಶ್ಚಿಮಾತ್ಯ ವಸ್ತ್ರಗಳನ್ನು ಧರಿಸಿ ಪ್ರತಿನಿತ್ಯವೂ ಮುಖಕ್ಷೌರ ಮಾಡಿಕೊಂಡು ಬರುವಂತೆ ವಿಶ್ವೇಶ್ವರಯ್ಯನವರು ಪ್ರೋತ್ಸಾಹಿ ಸುತ್ತಿದ್ದರು. ಇದಕ್ಕೆ ಮೊದಲು ಸ್ವಯಂ ಮುಖಕ್ಷೌರ ಮಾಡಿಕೊಳ್ಳುವ

ರೂಢಿ ನಮ್ಮ ದೇಶದಲ್ಲಿರಲಿಲ್ಲ ಮೈಸೂರಿನ ಜರೀ ರುಮಾಲಿಗೆ ಇವರಿಂದ ಬಹಳ ಪ್ರಾಶಸ್ತ್ಯ ಬಂದಿತು. ಸರಕಾರದ ಸಣ್ಣ ತಾಬೇದಾರರ ಸಮ ವಸ್ತ್ರವೂ ಜರೀಪೇಟ ಆಯಿತು. ಮೈಸೂರು ಉಡುಪಿನ ವೈಶಿಷ್ಟ್ಯ ಅವರ ಜರತಾರಿ ಪೇಟ. ಪೇಟಾ ಕಟ್ಟುವ ಪದ್ಧತಿಯನ್ನು ನೋಡಿ, ಇವನು ಮೈಸೂರು ಸೀಮೆಯವನು ಎಂದು ಎಲ್ಲಿದ್ದರೂ ಸುಲಭವಾಗಿ ಗುರ್ತಿಸಬಹುದು ಈ ರುಮಾಲು ಧರಿಸುವುದರಲ್ಲಿ ಒಂದು ಹೆಮ್ಮೆ, ಒಂದು ಅಭಿಮಾನ ಅವರಿಗೆ ಈ ಪೇಟಾ ಧರಿಸಿರುವ ಅವರ ಭಾವಚಿತ್ರ ಗಳೇ ವಿಶೇಷ ಈಗ ಮೈಸೂರು ಜರೀಪೇಟ ಅಪರೂಪವಾಗುತ್ತಿದೆ.

ಪಾಶ್ಚಿಮಾತ್ಯ ಶಿಕ್ಷಣಕ್ಕೆ, ಇಂಗ್ಲಿಷ್ ಭಾಷೆಗೆ ಹೆಚ್ಚು ಪ್ರಾಶಸ್ತ್ಯ ಕೊಡುತ್ತಿದ್ದರು. ಪಾಶ್ಚಿಮಾತ್ಯ ವಿದ್ಯಾಲಯಗಳಲ್ಲಿ ಶಿಕ್ಷಣ ಪಡೆದು ಬಂದ ವರಿಗೆ ಸರಕಾರಿ ನೌಕರಿಯಲ್ಲಿ ವಿಶೇಷ ಪ್ರೋತ್ಸಾಹ, ಬೇಗ ಬೇಗನೆ ಮೇಲಿನ ಶ್ರೇಣಿಗೆ ಬರುವರು. ವಿದ್ಯಾರ್ಥಿಗಳನ್ನು ಮಾತ್ರವಲ್ಲದೆ, ದೊಡ್ಡ ವರನ್ನು ಸಹ ಪಾಶ್ಚಿಮಾತ್ಯ ದೇಶಗಳಿಗೆ ಹೋಗಿ ಬರಲು ವಿಶೇಷ ಪ್ರೋತ್ಸಾಹ ದೊರೆಯುತ್ತಿತ್ತು. ಅಲ್ಲಿನ ವ್ಯಾಪಾರ ಪದ್ಧತಿ, ಯಂತ್ರಾಗಾರಿಕೆ, ಕೈಗಾರಿಕೆ ಇವುಗಳನ್ನು ನೋಡಿ ಅನುಭವ ಪಡೆದು ಬರಲು ಸರಕಾರದ ಸಹಾಯದಿಂದ ಅನೇಕ ವರ್ತಕರು ಜರ್ಮನಿ ಮತ್ತು ಯೂರೋಪಿಗೆ ಹೋಗಿ ಬಂದರು. ದೇಶ ಪರ್ಯಟನೆಯಿಂದ ಹೆಚ್ಚು ಅನುಭವ ದೊರೆ ಯುತ್ತದೆ. ಪರ್ಯಟನವು ಶಿಕ್ಷಣದ ಒಂದು ಅಂಗ, ಅದೇ ಒಂದು ವಿದ್ಯಾಭ್ಯಾಸ ಎಂಬುದೇ ಅವರ ಅಭಿಪ್ರಾಯ. ಇತರರು ಪಾಶ್ಚಿಮಾತ್ಯ ದೇಶಗಳಿಗೆ ಹೋಗಿ ಬರುವಂತೆ ಪ್ರೋತ್ಸಾಹ ಕೊಡುತ್ತಿದ್ದುದು ಮಾತ್ರ ವಲ್ಲದೆ, ತಾವೇ ಸ್ವತಃ ಆರು ಸಾರಿ ಪರದೇಶಗಳಿಗೆ ಹೋಗಿ ಬಂದಿದ್ದಾರೆ.

ಭಾರತವು ಸ್ವಾತಂತ್ರ್ಯಗಳಿಸಿದ ತರುವಾಯ ದೇಶೀಯ ಭಾಷೆಗಳಿಗೆ ಹೆಚ್ಚು ಪ್ರೋತ್ಸಾಹ ಕೊಡಬೇಕೆಂಬುದು ಸರ್ವಮಾನ್ಯವಾಗಿದೆ. ರಾಷ್ಟ್ರಭಾಷೆ ಹಿಂದೀ ಆಂಗ್ಲಭಾಷೆಯ ಸ್ಥಾನವನ್ನು ಆಕ್ರಮಿಸಬೇಕೆಂಬುದು ಅನೇಕ ದೇಶಭಕ್ತರ ಅಭಿಮತ. ಪ್ರಾಂತ ಅಥವಾ ರಾಷ್ಟ್ರ ಭಾಷೆಯು ಶಿಕ್ಷಣ ಮಾಧ್ಯಮವಾಗಬೇಕೆಂಬ ಪ್ರಯತ್ನಗಳೂ ನಡೆಯುತ್ತಿವೆ.

ಆಂಗ್ಲ ಭಾಷೆಯ ಪ್ರಭಾವ ಮೊದಲಿಗಿಂತಲೂ ಕಡಮೆಯಾಗುತ್ತಿದೆ. ಆದರೆ ವಿಶ್ವೇಶ್ವರಯ್ಯನವರು ಇದನ್ನು ಸಂಪೂರ್ಣವಾಗಿ ಅನುಮೋದಿಸರು. ಆಂಗ್ಲಭಾಷೆಯಿಂದ ಭಾರತವು ವಿಶೇಷ ಪ್ರಯೋಜನ ಪಡೆದಿದೆ. ಈ ಪ್ರಯೋಜನವನ್ನು, ಲಾಭವನ್ನು ಕಳೆದು ಕೊಳ್ಳುವುದು ಬುದ್ಧಿವಂತಿಕೆಯಲ್ಲ. ತನ್ನ ವಿಶ್ವವಿದ್ಯಾಲಯದಲ್ಲಿ ಪ್ರಾರಂಭದಿಂದಲೂ ಆಂಗ್ಲಭಾಷೆಗೆ ವಿಶೇಷ ಸ್ಥಾನ ಕೊಡುತ್ತಾ ಬಂದಿದೆ. ಇದರಿಂದ ಪ್ರಪಂಚದ ಪ್ರಗತಿದಾಯಕ ರಾಷ್ಟ್ರ ಗಳಲ್ಲಿ ಮುಖ್ಯವಾದ ಇಂಗ್ಲೆಂಡ್ ಮತ್ತು ಅಮೇರಿಕ ಇವುಗಳೊಡನೆ ಎಲ್ಲ ಪ್ರಗತಿಪರ ಕ್ಷೇತ್ರಗಳಲ್ಲಿಯೂ ಸಂಪರ್ಕವಿಟ್ಟುಕೊಂಡು ಹೆಚ್ಚು ಪ್ರಯೋಜನ ಪಡೆಯಲು ಸಾಧ್ಯವಾಗಿದೆ ಪ್ರಪಂಚದ ಪರಿಸ್ಥಿತಿಯೇ ಬದಲಾಯಿಸಿದರೆ, ಆಗಿನ ಸನ್ನಿವೇಶವೇ ಪ್ರತ್ಯೇಕ. ಅದುವರೆಗೆ ಆಂಗ್ಲಭಾಷೆಯನ್ನು ಅಲ್ಲಗಳೆಯುವುದು, ತೊರೆಯುವುದು ಭಾರತದ ಹಿತಕ್ಕೆ ಶ್ರೇಯಸ್ಕರವಲ್ಲ.

ಪಾಶ್ಚಿಮಾತ್ಯ ದೇಶಗಳಿಗೆ ಜನರನ್ನು ಕಳುಹಿಸುತ್ತಿದ್ದುದು ಮಾತ್ರ ವಲ್ಲದೆ, ನೂತನ ಉದ್ಯಮಗಳನ್ನು, ಕೈಗಾರಿಕೆಗಳನ್ನು ಸ್ಥಾಪಿಸಬೇಕಾದಾಗ ಆಯಾ ವಿಭಾಗಗಳಲ್ಲಿ ನಿಷ್ಣಾತರಾದ ಪರಕೀಯರನ್ನು ಕರೆಸಿಕೊಂಡು ಅವರ ಅನುಭವದ ಪ್ರಯೋಜನ ಪಡೆಯಲು ವಿಶ್ವೇಶ್ವರಯ್ಯನವರು ಹಿಂತೆಗೆಯು ತ್ತಿರಲಿಲ್ಲ. ರೇಷ್ಮೆಯ ಅಭಿವೃದ್ಧಿಗೆ ಇಟಲಿಯ ವಾಷಿಂಗ್‌ಟರ್ ಮೇರಿ, ವ್ಯವಸಾಯದ ಶಾಖೆಗೆ ಡಾ|| ಕೋಲ್ಮನ್, ಕೈಗಾರಿಕೆಗಳ ಬೆಳೆವಣಿಗೆಗೆ ಚಾಟರ್ ಟನ್, ವಿದ್ಯುತ್ ಇಲಾಖೆಗೆ ಎಸ್. ಜಿ. ಫೋರ್ಬ್ಸ್, ನೂತನವಾಗಿ ಸ್ಥಾಪಿತವಾದ ಮೈಸೂರು ಬ್ಯಾಂಕಿಗೆ ರೋಸ್, ತೋಟಗಳಿಗೆ ಕ್ರಂಬಿಗಲ್, ಭದ್ರಾವತಿ ಕಬ್ಬಿಣ ಕಾರ್ಖಾನೆಯ ಸ್ಥಾಪನೆಗೆ ಮಾರ್ಷಲ್ ಪೆರಿನ್ ಮೊದಲಾಗಿ ಹನ್ನೊಂದು ಜನ ಅಮೆರಿಕದವರು ಇವರ ಕಾಲದಲ್ಲಿ ಮೈಸೂರಿ ನಲ್ಲಿ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸುತ್ತಿದ್ದರು.

ಹೀಗೆಂದ ಮಾತ್ರಕ್ಕೆ ವಿಶ್ವೇಶ್ವರಯ್ಯನವರಿಗೆ ಸ್ವದೇಶಾಭಿಮಾನವಿಲ್ಲ, ನಮ್ಮ ದೇಶದ ವೈಜ್ಞಾನಿಕರು, ಇಂಜನಿಯರುಗಳು ಶಿಲ್ಪಿಗಳು ಇವರ ಕಾರ್ಯದಕ್ಷತೆಯಲ್ಲಿ ಸಾಮರ್ಥ್ಯದಲ್ಲಿ ನಂಬಿಕೆಯಿಲ್ಲ ಎಂದು ಭಾವಿಸಲಾಗದು. ಭದ್ರಾವತಿ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಯಂಥ, ಭಾರತಕ್ಕೇ ನವೀನ

ವಾದ ಉದ್ಯಮಗಳನ್ನು ಸ್ಥಾಪಿಸುವುದರಲ್ಲಿ ಅವರು ಪರದೇಶದ ತಜ್ಞರ ಮತ್ತು ಅನುಭವಿಗಳ ನೆರವು ಪಡೆಯುತ್ತಿದ್ದರು. ಅವರನ್ನು ಕರೆಸಿಕೊಳ್ಳುವಾಗಲೇ ಇಂತಿಷ್ಟು ವರುಷಗಳಲ್ಲಿ ದೇಶೀಯರನ್ನು ಆ ಕೆಲಸಗಳಿಗೆ ತರಬೇತು ಕೊಡಬೇಕು ಎಂದು ಕರಾರು ಮಾಡಿಸಿಕೊಳ್ಳುತ್ತಿದ್ದರು. "ಪರದೇಶೀಯ ಕಾರ್ಯದಕ್ಷರು ತಾವು ಲಾಭವನ್ನು ಪಡೆಯುವುದರಲ್ಲಿ ನಮಗೂ ಲಾಭವಾಗುವಂತೆ ನಡೆಯುವುದಾದರೆ ನಾವು ಅವರ ಸಹಾಯವನ್ನು ಸಂತೋಷದಿಂದ ತೆಗೆದುಕೊಳ್ಳಬೇಕು. ಆದರೆ ದೊಡ್ಡ ಉದ್ಯಮಗಳು ಮೊದಲಿನಿಂದ ತುದಿಯವರೆಗೂ ಹೊರಗಿನವರ ಸಹಾಯದಿಂದಲೇ ನಡೆಯುವುದಾದರೆ ನಮ್ಮ ಜನರ ಶಕ್ತಿ ಬೆಳೆಯುವುದಿಲ್ಲ, ದೇಶದ ಯೋಗ್ಯತೆ, ಉದ್ಯೋಗ ಶೀಲತೆ, ಅನುಭವ ಹೆಚ್ಚುವುದಿಲ್ಲ" ಎಂಬುದನ್ನೂ ಅವರು ಮನಗಂಡಿದ್ದರು. ಪರದೇಶೀಯರನ್ನು ಕಾರ್ಯದರ್ಶಿಗಳಾಗಿ ಸರ್ಕಾರಕ್ಕೆ ತೆಗೆದುಕೊಳ್ಳುತ್ತಿರಲಿಲ್ಲ, ಹೊಸದಾಗಿ ಶಾಶ್ವತ ಅಧಿಕಾರದ ಶ್ರೇಣಿಗೆ ತೆಗೆದುಕೊಳ್ಳುತ್ತಿರಲಿಲ್ಲ. ತಾತ್ಕಾಲಿಕ ನೌಕರಿಗಳಿಗೆ ಸೇರಿಸಿಕೊಂಡು ಪಡೆಯಬೇಕಾದಷ್ಟು ಪ್ರಯೋಜನ ಪಡೆದು ತದನಂತರ ಬೀಳ್ಕೊಡುತ್ತಿದ್ದರು ಬಿಳಿ ಆನೆಯಾದ ಭದ್ರಾವತಿ ಕಾರ್ಖಾನೆಯನ್ನು ಮುಚ್ಚಿಬಿಡಬೇಕು ಲಾಭದಾಯಕವಾಗಿ ಇದನ್ನು ನಡೆಸಿಕೊಂಡು ಬರಲು ಸಾಧ್ಯವಿಲ್ಲ ಎಂಬ ಬೊಬ್ಬೆಯು ದೇಶದಲ್ಲಿ ಎದ್ದಾಗ ಭಾರಿ ಸಂಬಳ ಪಡೆಯುತ್ತಿದ್ದ ಅಮೆರಿಕದವರನ್ನು ಕ್ರಮೇಣ ಕೆಲಸದಿಂದ ತೆಗೆದು ಇಂಥ ದೊಡ್ಡ ನೂತನ ಉದ್ಯಮವು ಸಂಪೂರ್ಣವಾಗಿ ದೇಶೀಯರಿಂದಲೇ ನಡೆಯುವಂತೆ ಮಾಡಿದ ಎದೆಗಾರಿಕೆ ವಿಶ್ವೇಶ್ವರಯ್ಯನವರದು. ಇದಕ್ಕೆ ಮೊದಲೇ ಸ್ಥಾಪಿತವಾಗಿದ್ದ ಜಮ್‌ಷೇದ್‌ಪುರದ ತಾತಾ ಅವರ ಉಕ್ಕಿನ ಕಂಪೆನಿಯ ಮೇಲ್ವಿಚಾರಣೆಯು ಪರದೇಶೀಯರ ಕೈಯಲ್ಲೇ ಇದ್ದಾಗ ಭದ್ರಾವತಿಯನ್ನು ಭಾರತೀಯವಾಗಿ ಮಾಡಿದುದು ಅವರ ದೇಶಭಕ್ತಿ, ಸ್ವಜನರ ವಿಶ್ವಾಸ, ಸ್ವಾವಲಂಬನ ನೀತಿ, ಧೈರ್ಯ ಸ್ಥೈರ್ಯಗಳು.

# ಬಿರುಗಾಳಿ

ವಿಶ್ವೇಶ್ವರಯ್ಯನವರು ನಮ್ಮ ದೇಶಕ್ಕೆ ಸಲ್ಲಿಸಿರುವ ಸೇವೆ ಅಪಾರ. ಈ ಸೇವೆಯನ್ನು ಮೂರು ಭಾಗಗಳಾಗಿ ವಿಂಗಡಿಸಬಹುದು—ಮೈಸೂರಿಗೆ ಬರುವುದಕ್ಕೆ ಮೊದಲು ಸಲ್ಲಿಸಿರುವ ಸೇವೆ, ಮೈಸೂರಿನಲ್ಲಿ ಛೀಫ್ ಇಂಜಿನಿಯರ್ ಮತ್ತು ದಿವಾನರಾಗಿ ಮಾಡಿದ ಕಾರ್ಯ, ನಿವೃತ್ತರಾದ ಮೇಲೆ ಮಾಡಿರುವ ಕೆಲಸ. ಆ ಸೇವೆ ಎಷ್ಟು ಅಪಾರವೋ, ಸೇವಾಕ್ಷೇತ್ರವೂ ಅಷ್ಟು ವಿಶಾಲ, ವಿವಿಧ. ಮೈಸೂರಿನಲ್ಲಿ ಅಧಿಕಾರಕ್ಕೆ ಸೇರುವ ಮೊದಲು ಬೊಂಬಾಯಿ, ಹೈದರಾಬಾದ್, ಮತ್ತು ಇತರ ಕಡೆಗಳಲ್ಲಿ ಮಾಡಿರುವ ಕೆಲಸಗಳನ್ನು ಈಗಾಗಲೇ ಹೇಳಲಾಗಿದೆ ಈ ಪ್ರಾಂತಗಳಲ್ಲದೆ ಬರೋಡ, ಭೂಪಾಲ್, ಗ್ವಾಲಿಯರ್, ಇಂದೋರ್, ಕಾಥೇವಾಡ, ಕೊಲ್ಹಾಪುರ, ಭಾವನಗರ, ಸಾಂಗ್ಲಿ, ಅಕ್ಕಲಕೋಟೆ, ಮೌರವಿ, ಫಲ್ಟನ್, ವಂಕನೇರ ಮೊದಲಾದ ಸಂಸ್ಥಾನಗಳೂ; ಕರಾಚಿ, ಸಕ್ಕೂರ್, ಸೂರತ್, ಧೂಲಿಯಾ, ನಾಸಿಕ್, ಪಂಢರಾಪುರ, ಧಾರವಾಡ, ಬಿಜಾಪುರ, ಬೆಳಗಾಂ, ನಾಗಪುರ, ಅಹಮದಾಬಾದ್, ಪೂನ ಈ ನಗರಗಳ ಪೌರಸಭೆಗಳೂ ಇವರ ಸೇವೆ ಮತ್ತು ಸಲಹೆಗಳಿಂದ ಅನೇಕ ವಿಧಗಳಲ್ಲಿ ಪ್ರಯೋಜನ ಪಡೆದಿವೆ ಗೋವಾ ಬಂದರಿಗೂ ಊರಿಗೂ ನೀರು ಒದಗಿಸುವ ಯೋಜನೆಯನ್ನು ಆ ಸರಕಾರದ ಪ್ರಾರ್ಥನೆಯಂತೆ ಸಿದ್ಧಮಾಡಿಕೊಟ್ಟರು. ಮಹಾತ್ಮ ಗಾಂಧಿಜೀಯವರ ಸೂಚನೆಯಂತೆ ೧೯೩೭ ರಲ್ಲಿ ಒರಿಸ್ಸಾ ಪ್ರಾಂತಕ್ಕೆ ಭೇಟಿಯಿತ್ತು, ಮಹಾನದಿಯ ಪ್ರವಾಹದ ಹಾವಳಿಯನ್ನು ತಡೆಗಟ್ಟುವ ಯೋಜನೆಯನ್ನು ಸಿದ್ಧಗೊಳಿಸಿದರು ಕೇವಲ ಪ್ರವಾಹ ತಡೆಗಟ್ಟುವುದಕ್ಕಾಗಿ ಮಾತ್ರವೇ ಅಪಾರ ಹಣ ಸರಕಾರ ವೆಚ್ಚ ಮಾಡಲು ಮುಂದೆ ಬರಲಿಲ್ಲ. ಆದರೆ ಈ ಯೋಜನೆಯನ್ನೇ ಮತ್ತಷ್ಟು ವಿಸ್ತೃತಗೊಳಿಸಿ, ದೇಶೋಪಯುಕ್ತವಾಗುವಂತೆ ಸ್ವತಂತ್ರ ಭಾರತ ಸರಕಾರ ಬೃಹದ್ ಯೋಜನೆ ಸಿದ್ಧಗೊಳಿಸಿದೆ. ಇದೇ ಹಿರಾಕುಡ್ ಜಲಾಶಯ

ಲೋಕ ವಿಖ್ಯಾತ ಮೈಸೂರು ಇಂಜಿನಿಯರೆಂದು, ಭಾರತದ ಅನೇಕ ಬೃಹತ್ ಯೋಜನೆಗಳು—ವಿಶೇಷವಾಗಿ ಜಲಾಶಯಗಳು ಮತ್ತು ನೀರಾವರಿಗಳು ಕಾರ್ಖಾನೆಗಳು-ಇವರ ಹೆಸರನ್ನು ಚಿರಸ್ಮರಣೀಯವಾಗಿ ಮಾಡಿವೆ. ಆದರೆ ವಿಶ್ವೇಶ್ವರಯ್ಯನವರು ಕೇವಲ ಇಂಜಿನಿಯರಾಗಿ ಮಾತ್ರವಲ್ಲ ಕೀರ್ತಿ ಪಡೆದಿರುವುದು. ದೊಡ್ಡ ದೊಡ್ಡ ನಗರ ಮತ್ತು ಯಂತ್ರಾಗಾರಗಳಲ್ಲಿ ಎಷ್ಟು ಪ್ರವೃತ್ತಿಯೋ ಅವರಿಗೆ ಭಾರತದ ಬೆನ್ನು ಮೂಳೆಯಾದ ಹಳ್ಳಿಗಳ ಅಭಿವೃದ್ಧಿಯಲ್ಲಿಯೂ ಅಷ್ಟೇ ಆಸಕ್ತಿ ಗ್ರಾಮೋದ್ಧಾರ, ಆರ್ಥಿಕಾಭಿವೃದ್ಧಿ, ಸಮಾಜ ಸೇವೆ, ರಾಜಕೀಯ, ರಾಜ್ಯಾಡಳಿತ, ಶಿಕ್ಷಣ ಎಲ್ಲದರಲ್ಲಿಯೂ ಇವರದು ಎತ್ತಿದ ಕೈ.

ಮೈಸೂರು ಸೀಮೆಯಲ್ಲಿ ಎತ್ತ ನೋಡಿದರೂ ಇವರ ಕೈವಾಡ ಕಾಣುತ್ತದೆ ಕನ್ನಂಬಾಡಿ, ಭದ್ರಾವತಿ, ಮೈಸೂರು ಬ್ಯಾಂಕು, ವಾಣಿಜ್ಯ ಸಂಘ, ಸಾಬೂನು ಕಾರ್ಖಾನೆ, ಗಂಧದ ಎಣ್ಣೆ ಕಾರ್ಖಾನೆ, ಕಾಗದ ಕಾರ್ಖಾನೆ, ಹತ್ತಿ ಮತ್ತು ಎಣ್ಣೆ ಗಿರಣಿಗಳು, ಸರಕಾರದ ನೇಯ್ಗೆ ಕಾರ್ಖಾನೆ, ಪಾತ್ರೆ ಕಾರ್ಖಾನೆ, ಚರ್ಮಾಲಯ, ಸೆಂಟ್ರಲ್ ಇಂಡಸ್ಟ್ರಿಯಲ್ ವರ್ಕ್ ಷಾಪ್, ಚಾಮರಾಜೇಂದ್ರ ವೃತ್ತಿ ಶಿಕ್ಷಣ ಶಾಲೆ, ಬೆಂಗಳೂರು ಮಿಂಟೋ ಕಣ್ಣಾಸ್ಪತ್ರೆಯ ನೂತನ ಭವ್ಯ ಕಟ್ಟಡ, ಮೈಸೂರಿನ ಜ್ಯೂಯಲ್ ಫಿಲ್ಟರ್ ಹೀಗೆಯೇ ಪಟ್ಟಿ ಮಾಡುತ್ತಾ ಹೋಗಬಹುದು.

ವಿಶ್ವೇಶ್ವರಯ್ಯನವರ ಕಾಲದಲ್ಲಿ ಅನೇಕ ದೊಡ್ಡ ಕೈಗಾರಿಕೆಗಳನ್ನು ಸರಕಾರ ತಾನೇ ಸ್ಥಾಪನೆ ಮಾಡಿತು; ಅಲ್ಲದೆ ಖಾಸಗೀ ಸಂಸ್ಥೆಗಳೂ ವ್ಯಕ್ತಿಗಳೂ ಸ್ಥಾಪಿಸುವಂತೆಯೂ ಸಹಾಯ ಪ್ರೋತ್ಸಾಹ ನೀಡಿತು. ಇದರಿಂದ ಅನೇಕ ಸಣ್ಣ ಪುಟ್ಟ ಕಾರ್ಖಾನೆಗಳು, ಗಿರಣಿಗಳು ಸ್ಥಾಪಿತವಾದುವು. ಹೆಂಚಿನ ಕಾರ್ಖಾನೆ, ಔಷಧ ತಯಾರಿಕೆ ಕಾರ್ಖಾನೆ, ಹತ್ತಿ ಬಟ್ಟೆ ಗಿರಣಿ ಮತ್ತು ನೂಲಿನ ಗಿರಣಿ, ನೇಯ್ಗೆ ಕಾರ್ಖಾನೆ, ಮುದ್ರಣಾಲಯಗಳು, ಆಧುನಿಕ ಹೋಟೇಲುಗಳು ಆಗ ಬೆಳೆದ ಉದ್ಯೋಗಗಳಲ್ಲಿ ಕೆಲವು ಅವರು ಉದ್ದೇಶಿಸಿದ್ದ ಅನೇಕ ಯೋಜನೆಗಳು ಅವರ ಕಾಲದಲ್ಲಿಯೇ ಕೈಗೂಡಿ ಫಲಕ್ಕೆ ಬರುವುದು ಸಾಧ್ಯವಾಗಲಿಲ್ಲ ಅವರ ತರುವಾಯ ಬಂದವರಿಗೆ ಈ ಯೋಜನೆಗಳನ್ನು ಜಯಪ್ರದಗೊಳಿಸುವ ಸದವಕಾಶ ದೊರೆಯಿತು

ವಿಶ್ವೇಶ್ವರಯ್ಯನವರ ಆರ್ಥಿಕ ಯೋಜನೆ ಏಕಮುಖವಾದುದಲ್ಲ; ಸರ್ವಾಂಗ ಪರಿಪುಷ್ಟ. ಅದರಲ್ಲಿ ಒಂದಕ್ಕೊಂದಕ್ಕೆ ಜೋಡಣೆ, ಹೊಂದಾಣಿಕೆ ಇದೆ. ಗ್ರಾಮಾಭಿವೃದ್ಧಿ ಎಂದರೆ ರೈತನ ಅಭಿವೃದ್ಧಿ, ಗ್ರಾಮ ಕೈಗಾರಿಕೆಗಳ ಪುನರುಜ್ಜೀವನ. ರೈತನ ಮುಖ್ಯ ಆಧಾರ ದನ. ಆದ್ದರಿಂದ ಕಾಲ್ನಡೆಯ ತಳಿಗಳ ಬೆಳವಣಿಗೆಗೆ ಅಮೃತ್‌ಮಹಲ್ ಶಾಖೆ, ದನಗಳ ಜಾತ್ರೆ. ರೈತನಿಗೆ ಉತ್ತಮ ಸೀಮೆ ನೇಗಿಲು ಬೇಕು, ಕೋಲಾರದಲ್ಲಿ ನೇಗಿಲು ತಯಾರಿಸುವ ಕಾರ್ಖಾನೆ ಮೊದಲಾಯಿತು. ನೇಗಿಲಿಗೆ ಉಕ್ಕು, ಕಬ್ಬಿಣಬೇಕು, ಭದ್ರಾವತಿಯಲ್ಲಿ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ ಕಬ್ಬಿಣ ಕರಗಿಸಲು ಕಲ್ಲಿದ್ದಲು ಬೇಕು. ಮೈಸೂರಿನಲ್ಲಿ ಕಲ್ಲಿದ್ದಲು ದೊರೆಯದು. ಕಾಡಿನ ಮರಗಳನ್ನು ಸುಟ್ಟು ಇದ್ದಿಲು ಮಾಡು. ಇದಕ್ಕೆ ಅನುಭವ ಸಾಲದು; ಅನುಭವಸ್ಥರಾದ ಅಮೆರಿಕದವರನ್ನು, ಜರ್ಮನರನ್ನು ಕರೆಸು. ಕಾಡಿನಿಂದ ಸೌದೆ ತರಬೇಕು, ಟ್ರಾಂವೇ ಮಾಡು. ಕಬ್ಬಿಣ ಸಾಗಿಸಲು ಅನುಕೂಲ ಬೇಕು, ರೈಲು ಹಾಕು. ವ್ಯಾಪಾರಕ್ಕೆ ಹಣಬೇಕು; ಮೈಸೂರು ಬ್ಯಾಂಕನ್ನು ಸ್ಥಾಪಿಸು. ವರ್ತಕರಲ್ಲಿ ಒಗ್ಗಟ್ಟುಬೇಕು; ವಾಣಿಜ್ಯ ಸಂಘ ಏರ್ಪಡಿಸು. ವರ್ತಕರಿಗೆ ತಿಳಿವು ಸಾಲದು; ವಾಣಿಜ್ಯ ಶಾಲೆ ಸ್ಥಾಪಿಸು, ಪಾಶ್ಚಿಮಾತ್ಯ ದೇಶಗಳಿಗೆ ಹೋಗಿ ಬಾ, ಅನುಭವಗಳಿಸು. ಹಳ್ಳಿಗರಿಗೆ ತಿಳುವಳಿಕೆ ಕಡಮೆ; ಪ್ರಚಾರೋಪನ್ಯಾಸ, ಯಕ್ಷಿಣಿದೀಪದ ಉಪನ್ಯಾಸ, ಸಂಚರಿಸುವ ಪುಸ್ತಕ ಭಂಡಾರ, ರಾತ್ರಿ ಶಾಲೆಗಳು ಇವುಗಳಿಂದ ತಿಳಿವು ಬೀರು. ನಮ್ಮ ಜನಕ್ಕೆ ವಿದ್ಯೆ ಸಾಲದು—ವಿಶ್ವವಿದ್ಯಾಲಯವಾಗಲಿ. ಇದಕ್ಕೆಲ್ಲ ಹಣ ಸಾಲದು—ಸಾಲ ಎತ್ತು, ಕಂದಾಯ ಹೆಚ್ಚಿಸು. ಸಾಲ ತೀರಿಸುವುದು ಹೇಗೆ? ಜನರಿಂದಲೇ ಸಾಲ ಪಡೆದುಕೊ ಜನರ ಬಳಿ ಕೂಡಿಟ್ಟ ಹಣವೆಲ್ಲಿ? ಸೇವಿಂಗ್ಸ್ ಬ್ಯಾಂಕ್ ಸ್ಥಾಪಿಸು, ಮಿತವ್ಯಯ ಮಾಡು, ವ್ಯಾಪಾರ ಹೆಚ್ಚಿಸು, ದುಡಿ, ಸಹಕರಿಸಿ ಕೆಲಸಮಾಡು ದುಡಿದು ಕೆಟ್ಟವರಿಲ್ಲ. ಕೊಳೆತು ಕೆಡುವುದಕ್ಕಿಂತ ದುಡಿದು ಸಾಧಿಸುವುದು ಮೇಲು. ದುಡಿ, ಗಳಿಸು, ವೆಚ್ಚ ಮಾಡು. ಉಳಿದರೆ ಬ್ಯಾಂಕಿನಲ್ಲಿಡು, ಹೂತಿಡಬೇಡ. ಇದು ಅವರ ಪುನ ರ್ನಿರ್ಮಾಣ ಧೋರಣೆ.

ನಮ್ಮ ದೇಶದ ಸಂಪತ್ತನ್ನು ಹೇಗೆ ಬೆಳಸಬೇಕೆಂಬುದನ್ನು ನಿರ್ಧರಿಸಲು ೧೯೧೧ ರಲ್ಲಿ ಸಂಪದಭಿವೃದ್ಧಿ ಸಮ್ಮೇಳನವನ್ನು ನೆರೆಸಿದರು. ವರ್ಷಕ್ಕೊಮ್ಮೆ ನಾಡಿನ ಅಧಿಕಾರಿಗಳು, ಸಾರ್ವಜನಿಕ ಮಹನೀಯರೂ ಕಲೆತು ದೇಶದ ಆರ್ಥಿಕೋನ್ನತಿಗೆ ಬೇಕಾದ ವಿಷಯಗಳನ್ನು ಚರ್ಚಿಸುವುದೇ ಈ ಸಮ್ಮೇಳನದ ಉದ್ದೇಶ. ೧೯೧೫ ರಲ್ಲಿ ನಡೆದ ಆರನೇ ವಾರ್ಷಿಕ ಸಮ್ಮೇಳನಕ್ಕೆ ಅಧ್ಯಕ್ಷರಾಗಿ ವಿಶ್ವೇಶ್ವರಯ್ಯನವರು ದೀರ್ಘ ಭಾಷಣ ಮಾಡಿದರು. ಆ ಸಮಯದಲ್ಲಿ ಅವರು ಆಡಿದ ಮಾತುಗಳು ಅವರ ಆರ್ಥಿಕ ವಿಚಾರದ ಓಟವನ್ನು ಹೊರಗೆಡಹುತ್ತವೆ :—

" ನಮ್ಮ ನಾಡು ವ್ಯವಸಾಯದ ಬೀಡು. ಕೇವಲ ವ್ಯವಸಾಯವನ್ನೇ ಅವಲಂಬಿಸಿ, ಬಂದ ದವಸ ಧಾನ್ಯಗಳನ್ನು ಮಾರಿ ಬದುಕುವ ನಾಡು ಎಂದಿಗೂ ಬಡತನದಿಂದ ಮುಕ್ತವಾಗದು. ರೈತನಿಗೆ ಬೇಕಾದ ನೇಗಿಲು, ಗುಳ, ಕಬ್ಬಿನಗಾಣ ಇವುಗಳನ್ನು ನಮ್ಮಲ್ಲಿಯೇ ತಯಾರು ಮಾಡುವುದರಿಂದ ಯಂತ್ರವೂ ಸುಲಭದಲ್ಲಿ ದೊರೆಯುತ್ತದೆ, ಪರದೇಶಕ್ಕೆ ಹರಿದು ಹೋಗುವ ಹಣವೂ ಸ್ವದೇಶದಲ್ಲಿಯೇ ಉಳಿಯುತ್ತದೆ. ಕಾಡಿನಲ್ಲಿ ಬೆಳೆಯುವ ಮರ ಕಡಿದು ಸೌದೆಯಾಗಿ ಮಾರುವುದಕ್ಕಿಂತ ಕುರ್ಚಿ, ಮೇಜು ಮಾಡಿ ಮಾರಾಟ ಮಾಡಿದರೆ ಹೆಚ್ಚು ಹಣ ಸಿಗುತ್ತದೆ

" ಆದ್ದರಿಂದ ವ್ಯವಸಾಯ ಕೈಗಾರಿಕೆ ಎರಡೂ ಕೈ ಕಲೆಸಿ ಜೋಡಿಸಿಕೊಂಡು ಮುಂಬರಿಯಬೇಕು. ಕೈಗಾರಿಕೆ ಮತ್ತು ವಾಣಿಜ್ಯದ ಬೆಳವಣಿಗೆಗೆ ಅನುಕೂಲವಾದ ವಾತಾವರಣ ಕಲ್ಪಿಸಬೇಕು ವಹಿವಾಟಿಗೆ ವಿಶೇಷ ಗಮನ ಕೊಡಬೇಕು. ರೈಲು ಮತ್ತು ರಸ್ತೆಗಳನ್ನು ಹೆಚ್ಚಿಸಬೇಕು. ಹಳ್ಳಿಯ ರಸ್ತೆಗಳನ್ನೂ ಚೆನ್ನಾಗಿರಿಸಬೇಕು. ಹೊಟೇಲು ಇಲ್ಲದ ಹಳ್ಳಿ ಇರಬಾರದು. ಪಟ್ಟಣಗಳಲ್ಲಿ ಪ್ರಜಾ ಸಂಖ್ಯೆ ಸಾಲದು. ಒಟ್ಟು ಪ್ರಜಾ ಸಂಖ್ಯೆಯ ಹತ್ತರಲ್ಲಿ ಒಂದು ಭಾಗ ಮಾತ್ರ ಪಟ್ಟಣಗಳಲ್ಲಿದೆ ಇದು ಇಮ್ಮಡಿಯಾದರೂ ಆಗಬೇಕು. ಹಾಗಾದರೆ ಮಾತ್ರವೇ ಕೈಗಾರಿಕೆಗಳ ಬೆಳವಣಿಗೆಗೆ ಅನುಕೂಲವಾದೀತು ನಗರದ ವಿಸ್ತರಣಗಳು ಹೊಸ ಜನಕ್ಕಾಗಿ ಸಿದ್ಧವಿರಬೇಕು ಪ್ರತಿ ಊರಿನಲ್ಲಿಯೂ ವ್ಯವಸಾಯ, ಕೈಗಾರಿಕೆ

ಉತ್ಪಾದನೆ, ಯಂತ್ರ, ಉಪಕರಣಗಳು ಇವುಗಳನ್ನು ಪ್ರದರ್ಶಿಸಲು ಮ್ಯೂಸಿಯಂ ಅಥವಾ ಪ್ರದರ್ಶನಾಲಯಗಳಿರಬೇಕು. ಪುಸ್ತಕ ಭಂಡಾರ, ವಾಚನಾಲಯ, ವಾರ್ತಾ ಸಂಗ್ರಹ ಕಚೇರಿಗಳೂ ಆಗತ್ಯ. ಐದಾರು ದೊಡ್ಡ ಕೈಗಾರಿಕೆಗಳಿಲ್ಲದ ಪಟ್ಟಣ, ಒಂದೆರಡು ಗ್ರಾಮ ಕೈಗಾರಿಕೆಗಳಿಲ್ಲದ ಹಳ್ಳಿ ವ್ಯರ್ಥ."

ವಿಶ್ವೇಶ್ವರಯ್ಯನವರು ಸುಮ್ಮನೆ ತತ್ವಗಳನ್ನುಪದೇಶಿಸಿ ಕೈ ಕಟ್ಟಿ ಕುಳಿತಿರುವ ವ್ಯಕ್ತಿಯಲ್ಲ. ಅವುಗಳನ್ನು ಕಾರ್ಯಗತ ಮಾಡುವುದರಲ್ಲಿ ಅದಕ್ಕೂ ಹೆಚ್ಚಿನ ಶ್ರದ್ಧಾಸಕ್ತಿ ವಹಿಸುವವರು. ಇದುವರೆಗೂ ಉಪಯೋಗಿಸದಿರುವ ಭೂಸಂಪತ್ತು, ಜಲ ಸಂಪತ್ತು, ಖನಿಜ ಸಂಪತ್ತು ನಮ್ಮ ದೇಶದಲ್ಲಿ ಎಷ್ಟಿದೆ ಎಂದು ಸರ್ವೆ ಮಾಡಿಸಿ, ಅಂಕಿ ಅಂಶಗಳನ್ನು ಸಂಗ್ರಹಿಸಿದರು. ಆದರ ಆಧಾರದ ಮೇಲೆ ಅನೇಕ ಯೋಜನೆಗಳನ್ನು ಸಿದ್ಧಗೊಳಿಸಿದರು. ಕೈಗಾರಿಕೆ, ವ್ಯವಸಾಯ, ವ್ಯಾಪಾರ ಇವುಗಳ ಅಭಿವೃದ್ಧಿಗಾಗಿ ಪ್ರತ್ಯೇಕ ಇಲಾಖೆಗಳು ೧೯೧೨ ರಲ್ಲಿ ಸ್ಥಾಪಿತವಾದವು ಸರಕಾರದ ಕಚೇರಿಗಳು ಜೇನು ಹುಳುಗಳ ಗೂಡಿನಂತೆ ಸದಾ ಚುರುಕಾಗಿ ಕೆಲಸಮಾಡ ತೊಡಗಿದುವು.

ಜನ ಸಹಾಯವಿಲ್ಲದೆ ಯಾವ ಸರಕಾರವಾದರೂ ಏನು ತಾನೆ ಮಾಡೀತು? ವಿಶ್ವೇಶ್ವರಯ್ಯನವರ ಯೋಜನೆಗಳನ್ನು ಗ್ರಹಿಸುವುದಕ್ಕೇ ಅನೇಕರಿಗೆ ಸಾಧ್ಯವಾಗಲಿಲ್ಲ. ಜನರಿಗೆ ತಿಳುವಳಿಕೆ ಕೊಡಲು, ಅವರಿಂದ ಸಹಕಾರ ಪಡೆಯಲು, ಸಂಪದಭಿವೃದ್ಧಿ ಸಮ್ಮೇಳನ, ಸಹಕಾರ ಸಮ್ಮೇಳನ, ಜಿಲ್ಲಾ ಅರ್ಥಿಕಾಭಿವೃದ್ಧಿ ಸಂಸ್ಥೆಗಳು, ಜಿಲ್ಲಾ ಮತ್ತು ತಾಲ್ಲೂಕು ಸಮ್ಮೇಳನಗಳು, ಪ್ರದರ್ಶನಗಳು. ತಾಲೂಕು ತಾಲೂಕಿಗೂ ಒಂದೊಂದು ಸಮ್ಮೇಳನ; ಹಳ್ಳಿಗೊಂದು ಗ್ರಾಮ ಸಂಘ; ಅದಕ್ಕೊಂದು ಕಚೇರಿ. ರೈತನಿಗೆ ಒಳ್ಳೆಯ ತಳಿಯ ದನಬೇಕು; ದನದ ಜಾತ್ರೆ ನೆರೆಸು. ಕಾಯಿಪಲ್ಯದ ಬೆಳೆ ನಮ್ಮಲ್ಲಿ ಕಡಿಮೆ, ತೋಟವಾಳಿಕೆ ಪ್ರದರ್ಶನ ಏರ್ಪಡಿಸು; ಕೈ ಕಸಬಿನವರಿಗೆ ಹೊಸ ಹೊಸ ರೀತಿ ಗೊತ್ತಿಲ್ಲ, ಅವರದೆಲ್ಲ ಓಬಿರಾಯನ ಕಾಲದ ಪದ್ಧತಿ—ಹೊಸ ರೀತಿ ಬಲ್ಲವರನ್ನು ಕರೆಸು, ನಾಡಿನಲ್ಲಿ ಪ್ರಚಾರಕ್ಕೆ ಕಳಿಸು. ನಾಟಿ ಹತ್ತಿಗಿಂತ ಕಾಂಬೋಡಿಯ ಬೀಜಹಾಕಿದರೆ ಕೂರಿಗೆಗೆ

ಖಂಡುಗ ಬೆಳೆಹೆಚ್ಚು; ವ್ಯವಸಾಯದ ಶಾಖೆ ಬೀಜ ತರಿಸಿ ಮಾರಲಿ. ಹಳ್ಳಿಗಳಲ್ಲಿ ನಾರು ಹುಣ್ಣಿನ ಕಾಟ ಬಹಳ, ಇಳಿಯುವ ಬಾವಿ ಮುಚ್ಚಿ ಸೇದುವ ಬಾವಿ ಮಾಡು. ಅದೊಂದು ಬಿರುಗಾಳಿ. ಈ ರೀತಿ ಕೆಲಸ ನಡೆಸಿ ಬಿಟ್ಟರು ತಮ್ಮ ಅವಧಿಯಲ್ಲಿ ವಿಶ್ವೇಶ್ವರಯ್ಯನವರು. ಆ ಸುಳಿಗೆ ಸಿಕ್ಕಿ ನಾಡಿಗೊಂದು ಹೊಸ ಜನ್ಮವೇ ಬಂತು ತೂಕಡಿಸುತ್ತಿದ್ದ ಜನರನ್ನು ಭೂಕಂಪದಿಂದ ಹೊಡೆದೆಬ್ಬಿಸಿದಂತಾಯಿತು

ಆಧುನಿಕ ವ್ಯವಸಾಯವನ್ನು ಅವಲಂಬಿಸಿ ರೈತ ತನ್ನ ಹೊಲದಲ್ಲಿ ಹೆಚ್ಚು ಬೆಳೆ ತೆಗೆಯಬೇಕು ಈ ಆಧುನಿಕ ವ್ಯವಸಾಯ ಪದ್ಧತಿಯನ್ನು ಕಲಿಸಲು ಕಾಲೇಜನ್ನು ಸ್ಥಾಪಿಸುವ ಪ್ರಯತ್ನ ನಡೆಸಿದರು ಈ ಪ್ರಯತ್ನದ ಫಲವಾಗಿ ಹೆಬ್ಬಾಳದಲ್ಲಿ ವ್ಯವಸಾಯ ಶಾಲೆಯು ೧೯೧೩ ರಲ್ಲಿ ಸ್ಥಾಪಿತ ವಾಯಿತು.

ಯಂತ್ರೋಪಕರಣಗಳನ್ನು ದೇಶದಲ್ಲಿ ಹೆಚ್ಚಾಗಿ ಬಳಸಬೇಕೆಂದು ಅವರ ಅಭಿಲಾಷೆ ತರುಣರಿಗೆ ಅವರ ಬಳಕೆಯಲ್ಲಿ ಶಾಸ್ತ್ರೀಯ ಅಭ್ಯಾಸ ದೊರೆಯಲೆಂದು 'ಕಮರ್ಷಿಯಲ್ ಮತ್ತು ಮೆಕಾನಿಕಲ್ ಇಂಜಿನಿಯರಿಂಗ್' ಶಾಲೆಯನ್ನು ಬೆಂಗಳೂರಿನಲ್ಲಿರುವ ರಂಗಾಚಾರ್ಲು ಭವನದಲ್ಲಿ ೧೯೧೩ ರಲ್ಲಿ ಸ್ಥಾಪಿಸಿದರು

ಲೆಕ್ಕ ಪತ್ರಗಳನ್ನಿಡುವುದು, ಆಧುನಿಕ ವ್ಯಾಪಾರ ಪದ್ಧತಿ ಇವು ಆಂಗ್ಲಭಾಷೆ ಬಾರದ ವರ್ತಕರಿಗೂ ತಿಳಿಯುವಂತೆ ಕನ್ನಡದಲ್ಲಿ ಉಪನ್ಯಾಸ ಮಾಲೆಗಳು ಪ್ರಾರಂಭವಾಯಿತು ವರ್ತಕರೆಲ್ಲರೂ ಒಂದುಗೂಡಿ ಸಹಕರಿಸಿ ದೊಡ್ಡ ಪ್ರಮಾಣದಲ್ಲಿ ವಾಣಿಜ್ಯ ವ್ಯಾಪಾರಗಳನ್ನು ನಡೆಸಿಕೊಂಡು ಬರಲು ವಾಣಿಜ್ಯದ ಭದ್ರತೆ ಮತ್ತು ಸಹಾಯಕ್ಕೆ ಸಹಕಾರ ಸಂಘಗಳು, ಬ್ಯಾಂಕುಗಳು ಮೈಸೂರು ಬ್ಯಾಂಕಿನ ಸ್ಥಾಪನೆ. ಕೈಗಾರಿಕೆ, ಕಲೆ, ಕುಶಲವಿದ್ಯೆಗಳ ಪ್ರೋತ್ಸಾಹಕ್ಕೆ ಮೈಸೂರಿನಲ್ಲಿ ಚಾಮರಾಜೇಂದ್ರ ಕಲಾ ಶಾಲೆ, ಬೆಂಗಳೂರಿನಲ್ಲಿ ಸರಕಾರದ ಸೆಂಟ್ರಲ್ ಇಂಡಸ್ಟ್ರಿಯಲ್ ವರ್ಕ್‌ಷಾಪ್. ಸ್ವದೇಶದಲ್ಲಿಯೂ, ಪರದೇಶದಲ್ಲಿಯೂ, ಕೈಗಾರಿಕೆ, ಕುಶಲವಿದ್ಯೆಗಳು, ಯಂತ್ರಗಾರಿಕೆ ಯಾವ ರೀತಿ ಬೆಳೆಯುತ್ತಿದೆ; ನಮ್ಮ ದೇಶದಲ್ಲಿ ದೊರೆಯುವ ಕಚ್ಚಾ

ಮೂಲು, ಇವುಗಳ ಬಳಿಕೆ ಜನರಿಗೆ ಮನದಟ್ಟಾಗುವಂತೆ ತಿಳಿಸಲು ದೊಡ್ಡ ವಸ್ತು ಪ್ರದರ್ಶನಗಳು. ಭಾರಿ ಪ್ರಮಾಣದ ಇಂಥ ಪ್ರದರ್ಶನವೊಂದು ಬೆಂಗಳೂರಿನಲ್ಲಿ ೧೯೧೫ ರಲ್ಲಿ ಪೌರಸಭೆಯ ಆಶ್ರಯದಲ್ಲಿ ನಡೆಯಿತು. ಇದೇ ವರುಷ ಮೈಸೂರು ವಿಶ್ವವಿದ್ಯಾನಿಲಯ ಮತ್ತು ಕನ್ನಡ ಸಾಹಿತ್ಯ ಪರಿಷತ್ತುಗಳು ಸ್ಥಾಪಿತವಾದವು

ವಿದ್ಯಾಭಿವೃದ್ಧಿ, ಆರ್ಥಿಕಾಭಿವೃದ್ಧಿ ಆದರೆ ಮಾತ್ರ ಸಾಲದು ಜನರ ನೀತಿಯ ಮಟ್ಟ ಹೆಚ್ಚಬೇಕು ಎಂದು ಅದಕ್ಕಾಗಿಯೇ ಪ್ರತ್ಯೇಕವಾದ 'ಸಿವಿಕ್ ಮತ್ತು ಸೋಷಿಯಲ್ ಪ್ರೊಗ್ರೆಸ್ ಅಸೋಸಿಯೇಷನ್' ೧೯೧೭ ರಲ್ಲಿ ಸ್ಥಾಪಿಸಿದರು.

ಸಾಮಾನ್ಯವಾಗಿ ರಾಜಕೀಯದಲ್ಲಿರುವವರಿಗೆ ಪತ್ರಿಕೆಗಳೆಂದರೆ ಸ್ವಲ್ಪ ವಕ್ರದೃಷ್ಟಿ. ಆದರೆ ಪ್ರಪಂಚದ ಆಗುಹೋಗುಗಳನ್ನರಿಯಲು, ಸರಕಾರ ಜನಕ್ಕಾಗಿ ಒದಗಿಸುತ್ತಿರುವ ಸೌಲಭ್ಯ, ಪಡುತ್ತಿರುವ ಶ್ರಮ ಇವುಗಳು ಜನರಿಗೆ ತಿಳಿಯಲು ಪ್ರತಿಯೊಂದು ಜಿಲ್ಲೆಯಲ್ಲಿಯೂ ಒಂದೊಂದು ವೃತ್ತ ಪತ್ರಿಕೆ ಇರಬೇಕೆಂದು ಇವರ ಆಸೆ. ಅಲ್ಲದೆ ಹಸ್ತ ಪತ್ರಿಕೆಗಳು ಪುಸ್ತಕಗಳನ್ನು ಅಚ್ಚು ಹಾಕಿಸಿ ಜನರಿಗೆ ದೊರಕಿಸಿಕೊಡಬೇಕು. ಅದಕ್ಕಾಗಿ ಮುದ್ರಣಾಲಯಗಳಿಗೆ, ಪುಸ್ತಕ ಭಂಡಾರಗಳಿಗೆ, ವಾಚನಾಲಯಗಳಿಗೆ ಪ್ರೋತ್ಸಾಹ ಕೊಟ್ಟರು. ಸಂಚರಿಸುವ ಪುಸ್ತಕ ಭಂಡಾರಗಳು ಇವರ ಕಾಲದಲ್ಲಿ ಜಾರಿಗೆ ಬಂದವು. ಬೆಂಗಳೂರು ಪ್ರೆಸ್ ಈ ಸಮಯದಲ್ಲಿ ಸರಕಾರದ ಸಹಾಯದಿಂದ ಸ್ಥಾಪಿತವಾಯಿತು. ವಯಸ್ಕರಿಗಾಗಿ ರಾತ್ರಿಯ ಶಾಲೆಗಳು. ಸರಕಾರದ ಕಾರ್ಯಕಲಾಪಗಳನ್ನು ಜನರಿಗೆ ತಿಳಿಸಲು ಆಂಗ್ಲ ಮತ್ತು ಕನ್ನಡ ಪತ್ರಿಕೆಗಳು ಹೊರಟವು.

ದೇಶವು ಸರ್ವತೋಮುಖವಾಗಿ ಅಭಿವೃದ್ಧಿಯಾಗಲು ಒಂದು ಭಾಗ ಅಥವಾ ಒಂದು ವರ್ಗ ಮುಂಬರಿದರೆ ಸಾಲದು. ಆದ್ದರಿಂದ ಹಿಂದುಳಿದ ಮಲೆನಾಡಿನ ಅಭಿವೃದ್ಧಿಗಾಗಿ ಗ್ರಾಮಾಭಿವೃದ್ಧಿಗಾಗಿ ಪ್ರತ್ಯೇಕ ಸಮಿತಿಗಳನ್ನು ರಚಿಸಿದರು. ಅಸ್ಪೃಶ್ಯರನ್ನು ಸರಕಾರಿ ಶಾಲೆಗಳಿಗೆ ಸೇರಿಸಲು ಮೊದಲಸಲ ಪ್ರಯತ್ನ ನಡೆದುದು ವಿಶ್ವೇಶ್ವರಯ್ಯನವರ ಕಾಲದಲ್ಲೇ. ಸಾರ್ವಜನಿಕ ಕೆರೆ

ಬಾವಿ ಕೊಳ ಆಸ್ಪತ್ರೆಗಳ ಅನುಕೂಲಗಳನ್ನು. ಅಸ್ಪೃಶ್ಯರೆಂದು ಹಿಂದೂ ಸಮಾಜವು ಹೊರದೂಡಿದ್ದ ಹಿಂದುಳಿದ ಸಂಗಡಕ್ಕೆ ಒದಗಿಸಿ ಕೊಡಲು ಪ್ರಯತ್ನ ನಡೆಸಿದ ಮೊದಲಿಗರಲ್ಲಿ ವಿಶ್ವೇಶ್ವರಯ್ಯನವರು ಮುಖ್ಯರು. ಬಲಾತ್ಕಾರದ ಶಿಕ್ಷಣ ಪದ್ಧತಿಯ ಪ್ರಯೋಗವೂ ಇವರ ಕಾಲದಲ್ಲಿ ನಡೆಯಿತು. ಮಹಮ್ಮದೀಯರ ವಿದ್ಯಾಭ್ಯಾಸಕ್ಕಾಗಿಯೂ, ಮಹಿಳೆಯರ ಶಿಕ್ಷಣಕ್ಕಾಗಿಯೂ ವಿಶೇಷ ಪ್ರಯತ್ನಗಳು ನಡೆದವು. ಗೃಹ ಶಿಕ್ಷಣ, ಮಕ್ಕಳ ಪಾಲನೆ-ಪೋಷಣೆ, ಪ್ರಥಮ ಚಿಕಿತ್ಸೆ, ಮೊದಲಾದ ಗೃಹೋಪಯುಕ್ತ ಸಾಮಾಜಿಕ ಶಿಕ್ಷಣವನ್ನು ಸ್ತ್ರೀಯರಿಗೆ ಕೊಡಲು ಪ್ರತ್ಯೇಕ ವ್ಯವಸ್ಥೆ ಮಾಡಲಾಗಿದ್ದಿತು. ಸ್ತ್ರೀಯರ ವಿಶ್ರಾಮ, ಆಟಪಾಟಗಳಿಗಾಗಿ ಸ್ತ್ರೀ ಸಮಾಜಗಳು, ' ಲೇಡೀಸ್ ಕ್ಲಬ್ 'ಗಳು ಸ್ಥಾಪಿತವಾದವು.

ಉನ್ನತ ಪರ್ವತಗಳಿಗೆ, ರಮ್ಯನದಿಗಳಿಗೆ, ಪ್ರಗಲ್ಭ ಜಲಪಾತಗಳಿಗೆ, ಮನ ಸೋಲುವ ದೃಶ್ಯಗಳಿಗೆ, ದಟ್ಟವಾದ ಕಾಡುಗಳಿಗೆ, ದೊಡ್ಡ ಆನೆ ಮೊದಲ್ಗೊಂಡು ಸಣ್ಣ ಪಶು ಪಕ್ಷಿ ಪ್ರಾಣಿಗಳಿಗೆ, ಬೇಲೂರು ಹಳೇಬೀಡು ಗೋಮಠೇಶ್ವರ ಮೊದಲಾದ ಭವ್ಯ ಕಲಾಕೃತಿಗಳಿಗೆ, ಹೆಸರಾಂತನಾಡು ಮೈಸೂರು. ಈ ದೃಶ್ಯಗಳನ್ನು ನೋಡಿತಣಿಯಲು ಜನರನ್ನು ಆಕರ್ಷಿಸಬೇಕು. ಮೈಸೂರಿನ ಹವಾ ಗುಣ ಬಹಳ ಉತ್ಕೃಷ್ಟವಾದುದು, ಮೋಹಕವಾದುದು. ಜನರಿಗೆ ಸಂಚಾರ ಸೌಲಭ್ಯಗಳನ್ನು ಒದಗಿಸಬೇಕು. ಇದಕ್ಕಾಗಿ ವಿಶ್ವೇಶ್ವರಯ್ಯನವರು ಉತ್ತಮವಾದ ರಸ್ತೆಗಳನ್ನು ಮಾಡಿಸಿದರು ಪ್ರೇಕ್ಷಕರು ತಂಗುವುದಕ್ಕಾಗಿ ಅಲ್ಲಲ್ಲಿ ಸರಕಾರಿ ಬಂಗಲೆಗಳನ್ನು ಕಟ್ಟಿಸಿದರು. ಸರಕಾರದ ಸಹಾಯದಿಂದ ಉತ್ತಮ ಹೊಟೇಲುಗಳನ್ನಿಡಿಸಿದರು.

ಅಧಿಕಾರಿಗಳೂ ಖಾಸಗಿ ಮಹನೀಯರೂ ಸಮಭಾವದಿಂದ ಕಲೆತು ಬೆರೆಯುವುದರಿಂದ ಸಾಮರಸ್ಯ ಬೆಳೆಯುತ್ತದೆ. ಇದರಿಂದ ಒಬ್ಬರ ಮನಸ್ಸನ್ನೊಬ್ಬರು ಅರಿಯಲು ಸಾಧ್ಯ. ಈ ಸಮರಸಭಾವದಿಂದ ಒಂದೆಡೆ ಕಲೆಯಲು, ದಿನದ ನಿತ್ಯಗಟ್ಟಲೆ ಕೆಲಸವಾದ ಮೇಲೆ ಸ್ವಲ್ಪ ವಿಶ್ರಾಂತಿ ಪಡೆಯಲು, ಸಂತೋಷವಾಗಿ ಆಟಪಾಟ ವಿನೋದಗಳಲ್ಲಿ ಸ್ವಲ್ಪಕಾಲ ಕಳೆಯಲು ಪಾಶ್ಚಿಮಾತ್ಯ ಮಾದರಿಯ ಸೆಂಚುರಿ ಕ್ಲಬ್ ಬೆಂಗಳೂರಿನಲ್ಲಿ, ಪೂನಾ

ದಲ್ಲಿ ಡೆಕ್ಕರ್ ಕ್ಲಬ್ ಇವು ವಿಶ್ವೇಶ್ವರಯ್ಯನವರ ಪ್ರಯತ್ನದಿಂದ ಸ್ಥಾಪಿತವಾದುವು. ೧೮೯೧ರಲ್ಲಿ ಸ್ಥಾಪಿತವಾದ ಡೆಕ್ಕರ್ ಕ್ಲಬ್, ಇಂದಿಗೂ ನಡೆಯುತ್ತಿದೆ. ೧೯೪೧ ರಲ್ಲಿ ಇದರ ಸ್ವರ್ಣ ಮಹೋತ್ಸವಕ್ಕೆ ವಿಶ್ವೇಶ್ವರಯ್ಯನವರನ್ನು ಅಧ್ಯಕ್ಷರಾಗಿರಲು ಆಹ್ವಾನಿಸಲಾಗಿತ್ತು ಈ ಸಂಸ್ಥೆಗೆ ಕೀರ್ತಿಶೇಷರಾದ ಗೋಖಲೆ, ರಾನಡೆ, ತಿಲಕ್, ಕೇಲ್ಕರ್ ಮೊದಲಾದ ಗಣ್ಯ ವ್ಯಕ್ತಿಗಳು ಸದಸ್ಯರಾಗಿದ್ದರು. ನಂದೀಬೆಟ್ಟವನ್ನು ಬೇಸಗೆಯ ವಿಶ್ರಾಮ ಸ್ಥಾನವಾಗಿ ಮಾಡಿದ್ದು ವಿಶ್ವೇಶ್ವರಯ್ಯನವರೇ ಕಲ್ಹತ್‌ಗಿರಿ, ದೇವರಾಯನದುರ್ಗ ಇವುಗಳನ್ನೂ ವಿಶ್ರಾಮ ಸ್ಥಾನಗಳಾಗಿ ಮಾಡಬೇಕೆಂದು ಅವರ ಅಭಿಲಾಷೆ.

ವಿದ್ಯಾಭ್ಯಾಸದ ಆವಶ್ಯಕತೆ ಕುರಿತು ಮಾತನಾಡುವುದರಲ್ಲಿ ವಿಶ್ವೇಶ್ವರಯ್ಯನವರಿಗೆ ಬೇಸರಿಕೆಯೇ ಇಲ್ಲ. 'ನಹಿ ಜ್ಞಾನೇನ ಸದೃಶಂ.' ಇತರ ದೇಶಗಳ ವಿದ್ಯಾವಂತರ ಸಂಖ್ಯೆಗಳನ್ನು ಹೋಲಿಸುತ್ತ ನಮ್ಮಲ್ಲಿ ನೂರಕ್ಕೆ ನೂರು ಜನ ಓದುಬರಹ ಬಲ್ಲವರಾಗಬೇಕೆಂಬ ಹಿರಿಯಾಸೆ ತೋರುತ್ತಿದ್ದರು. ಇದಕ್ಕಾಗಿ ದೇಶದಲ್ಲಿ ಕಡ್ಡಾಯದ ಪ್ರಾಥಮಿಕ ಶಿಕ್ಷಣ ರೂಢಿಗೆ ಬಂದಿತು ೧೯೧೮ರಲ್ಲಿ ೬೮ ಕೇಂದ್ರಗಳಲ್ಲಿ ಒತ್ತಾಯದ ಶಿಕ್ಷಣ ನಡೆಯುತ್ತಿತ್ತು. ೧೯೧೧-೧೨ರಲ್ಲಿ ೪೫೬೮ ಶಿಕ್ಷಣ ಸಂಸ್ಥೆಗಳಿದ್ದವು. ಈ ಸಂಖ್ಯೆ ೧೯೧೭-೧೮ರಲ್ಲಿ ೧೧,೨೯೪ಕ್ಕೆ ಏರಿತು. ಸ್ತ್ರೀಯರ ವಿದ್ಯಾಭ್ಯಾಸಕ್ಕೂ ವಿಶೇಷ ಪ್ರೋತ್ಸಾಹ ದೊರೆಯಿತು. ೧೯೧೪ರಲ್ಲಿ ಮೈಸೂರಲ್ಲಿ ಮೊಟ್ಟಮೊದಲಾಗಿ ಸ್ತ್ರೀಯರ 'ಹಾಸ್ಟಲ್' ಸ್ಥಾಪಿಸಲಾಯಿತು. ಅದುವರೆಗೆ ನಮ್ಮ ದೇಶದ ಉಚ್ಚ ಶಿಕ್ಷಣವು ಮದರಾಸು ವಿಶ್ವವಿದ್ಯಾನಿಲಯಕ್ಕೆ ಅಧೀನವಾಗಿತ್ತು. ಈ ಪರಾಧೀನತೆ ವಿಶ್ವೇಶ್ವರಯ್ಯನವರಿಗೆ ಸರಿಬೀಳಲಿಲ್ಲ. ನಮ್ಮ ಜನ ಸಂಖ್ಯೆಗಿಂತ ಸ್ವಲ್ಪ ಹೆಚ್ಚಾದ ಕೆನಡಾದಲ್ಲಿ ೨೦ ವಿಶ್ವವಿದ್ಯಾನಿಲಯಗಳು! ಮೈಸೂರಿಗೆ ಒಂದಾದರೂ ಬೇಡವೆ? ಅದಕ್ಕೆ ಬೇಕಾದಷ್ಟು ಎಡರುತೊಡರುಗಳು ಬಂದವು. ೧೯೧೪ ರಲ್ಲಿ ಮಹಾಘೋರ ವಿಶ್ವಸಂಗ್ರಾಮ ಮೊದಲಾಯಿತು. ಈ ಪರಿಸ್ಥಿತಿಯಲ್ಲೂ ಏಕಮನಸ್ಸಿನಿಂದ ಬುದ್ಧಿವಂತಿಕೆಯಿಂದ ಆಗಿನ ವೈಸರಾಯ್ ಆಗಿದ್ದ ಲಾರ್ಡ್ ಹಾರ್ಡಿಂಜ್ ಅವರ ಮನ ಒಲಿಸಿಕೊಂಡು ೧೯೧೬ರಲ್ಲಿ ಮೈಸೂರು ವಿಶ್ವವಿದ್ಯಾಲಯವನ್ನು ಸ್ಥಾಪಿಸಿದರು. ದೇಶೀಯ ಸಂಸ್ಥಾನಗಳಲ್ಲಿ ಇದೇ ಮೊದಲ ಸ್ವತಂತ್ರ ವಿಶ್ವವಿದ್ಯಾಲಯ.

# ಗ್ರಾಮಾಭ್ಯುದಯ

" ಭಾರತದಲ್ಲಿ ಪ್ರತಿ ನಾಲ್ಕು ಜನರಲ್ಲಿ ಮೂರು ಜನ ತಮ್ಮ ಜೀವನಕ್ಕೆ ಭೂಮಿಯನ್ನೇ ನಂಬಿರುತ್ತಾರೆ. ರೈತನೆ ನಾಡಿನ ಬೆನ್ನೆಲುಬು."

" ಪ್ರತಿಯೊಂದು ರಾಷ್ಟ್ರದಲ್ಲಿಯೂ—ಅದು ಮುಂದುವರಿದಿರಲಿ ಹಿಂದುಳಿದಿರಲಿ—ಸ್ವಲ್ಪ ಜನವಾದರೂ ಬೇಸಾಯದಲ್ಲಿ ಸದಾ ನಿರತರಾಗಿರುತ್ತಾರೆ. ಕಾಳುಕಡ್ಡಿಯಿಲ್ಲದೆ ಯಾವ ದೇಶವೂ ಬದುಕಲಾರದು. ಬದುಕಿಗೆ ಬೇಸಾಯ ಅಗತ್ಯ. ಸಾಧ್ಯವಾದಮಟ್ಟಿಗೆ ಪ್ರತಿಯೊಂದು ರಾಜ್ಯವೂ ಎಲ್ಲ ದೃಷ್ಟಿಗಳಿಂದಲೂ ಸ್ವಯಂಪರಿಪೂರ್ಣವಾಗಿರಲು ಈಗಿನ ಆಧುನಿಕ ಕಾಲದಲ್ಲಿ ಪ್ರಯತ್ನಿಸುತ್ತದೆ. ವ್ಯವಸಾಯದಿಂದ ಜೀವನಾಧಾರಕ್ಕೆ ಅತ್ಯಂತ ಅಗತ್ಯವಾದ ಅನ್ನ, ಕೈಗಾರಿಕೆಗೆ ಅಗತ್ಯವಾದ ಕಚ್ಚಾ ಮಾಲು, ರಫ್ತು ಮಾಡುವುದಕ್ಕೆ ಸರಕು ಸಿಗುತ್ತದೆ. ಸ್ವಯಂ ಪೂರ್ಣವಾಗಿರಬೇಕೆಂದು ಬಯಸುವ ಯಾವ ರಾಷ್ಟ್ರವಾದರೂ ಬೇಸಾಯವಿಲ್ಲದೆ ಬಾಳದು. ಆದರೆ ಯಾವ ರಾಷ್ಟ್ರವೇ ಆಗಲಿ, ಈ ಆಧುನಿಕ ಕಾಲದಲ್ಲಿ ಕೇವಲ ಬೇಸಾಯದಿಂದಲೇ ಐಶ್ವರ್ಯಗಳಿಸಿಲ್ಲ. ನಾಗರಿಕತೆ ಬೆಳೆದಂತೆ, ಮನುಷ್ಯನ ನಿತ್ಯಜೀವನದ ಆವಶ್ಯಕತೆಗಳು ಹೆಚ್ಚಿದಂತೆ, ಕೈಗಾರಿಕೆ ಮತ್ತು ಯಂತ್ರೋತ್ಪಾದನೆಗೆ ಸಂಬಂಧಪಟ್ಟ ಉದ್ಯೋಗಗಳಿಗೇ ಮಹತ್ವ ಹೆಚ್ಚು. ವ್ಯವಸಾಯಕ್ಕೆ ಅಷ್ಟು ಮಹತ್ವವಿಲ್ಲ. ನಾಗರಿಕತೆ ಎಂದರೆ ಕೈಗಾರಿಕೋದ್ಯಮ ಎಂಬಾಗಿ ಹೋಗಿದೆ." "ಬಹು ಸಂಖ್ಯೆಯ ಜನ ಭೂಮಿಯನ್ನೇ ನಂಬಿಕೊಂಡು ವ್ಯವಸಾಯದಲ್ಲೇ ನಿರತರಾಗಿರುವುದು ನಾಗರಿಕತೆಯ ಲಕ್ಷಣವಲ್ಲ. ಭಾರತವು ಈ ಆಧುನಿಕ ನಾಗರಿಕ ತತ್ವವನ್ನು ಇನ್ನೂ ಗ್ರಹಿಸಿಲ್ಲ."

ವ್ಯವಸಾಯದ ವಿಚಾರದಲ್ಲಿ ವಿಶ್ವೇಶ್ವರಯ್ಯನವರ ಖಚಿತಾಭಿಪ್ರಾಯವಿದು

ಹೀಗೆಂದ ಮಾತ್ರಕ್ಕೆ ಗ್ರಾಮಗಳೆಲ್ಲವನ್ನೂ ನಾಶಮಾಡಿಬಿಡಬೇಕೆಂದಲ್ಲ ಆದರೆ ಯಾರು ಭಾರತದ ಆರ್ಥಿಕ ಜೀವನದ ತಳಹದಿಯಾಗಿದ್ದಾನೋ ಅವನಿಗೆ ಸಾಕಷ್ಟು ಪ್ರೋತ್ಸಾಹ ದೊರೆಯುತ್ತಿಲ್ಲ. ಗ್ರಾಮಾಭಿವೃದ್ಧಿಗೆ ಸಾಕಷ್ಟು ಗಮನವಿಲ್ಲ.

ನಮ್ಮ ಗ್ರಾಮಗಳ ಹೀನಸ್ಥಿತಿಗೆ—ಇವು ಮುಖ್ಯ ಕಾರಣಗಳು. ಭೂ ವ್ಯವಸಾಯವನ್ನೇ ಅವಲಂಬಿಸಿರುವ ಜನರ ಸಂಖ್ಯೆ ಅಪಾರವಾಗಿ ಬೆಳೆಯುತ್ತಿರುವುದು; ಸಣ್ಣ ಸಣ್ಣ ಹಿಡುವಳಿಗಳು; ಪುರಾತನ ಬೇಸಾಯ ಪದ್ಧತಿಯನ್ನೇ ಈಗಲೂ ಅನುಸರಿಸುತ್ತಿರುವುದು; ಗೊಬ್ಬರದ ವ್ಯರ್ಥ; ವ್ಯವಧಾನವಿಲ್ಲದ ಕೆಲಸ; ಹೆಂಗಸರಿಂದ ಸಾಕಷ್ಟು ಕೆಲಸವನ್ನು ಉಚಿತ ರೀತಿಯಲ್ಲಿ ಪಡೆಯದಿರುವುದು.

"ಅಜ್ಜ ನೆಟ್ಟ ಆಲದಮರ" ಎಂದು ಪುರಾತನ ಪದ್ಧತಿಗಳನ್ನೇ ಈಗಲೂ ಅನುಸರಿಸಿಕೊಂಡು ಬರುತ್ತಲಿರುವ ನಮ್ಮ ಗ್ರಾಮಗಳು ಅಭಿವೃದ್ಧಿಯಾಗಬೇಕಾದರೆ ಹಳ್ಳಿಗಳ ವಾತಾವರಣವೇ ಬದಲಾಗಬೇಕು. ಜನರಲ್ಲಿ ಆತ್ಮವಿಶ್ವಾಸ, ನಂಬಿಕೆ, ಸಹಕಾರಮನೋಧರ್ಮ ಬೆಳೆಯುವಂತೆ ಮಾಡಬೇಕು. ಇಷ್ಟಾದರೆ ನೂರಾರು ಮುಖಗಳಲ್ಲಿ ಪ್ರಗತಿ ಪ್ರವಾಹವು ಹರಿಯುವುದರಲ್ಲಿ ಸಂದೇಹವಿಲ್ಲ. ಮೊಟ್ಟಮೊದಲ ಪ್ರಯತ್ನ ಕ್ಷಾಮವನ್ನು ಓಡಿಸುವುದು ಸಹಜ. ಪ್ರತಿ ಕುಟುಂಬವೂ ಸ್ವಲ್ಪ ಕಾಳನ್ನು ಕಷ್ಟಕಾಲಕ್ಕೆಂದು ತೆಗೆದಿಟ್ಟೀತು; ಸಹಕಾರಿ-ಕಣಜಗಳು ಮೊಳೆದಾವು; ಸಗಣಿ ಬೆರಣಿಯಾಗದೇ ಗೊಬ್ಬರವಾದೀತು; ಸೌದೆಗಾಗಿ ಪ್ರತ್ಯೇಕ ತೋಪುಗಳು ಬೆಳೆದಾವು; ಶ್ರಮ ತಗ್ಗಿಸುವ ಉಪಕರಣಗಳು ಹೆಚ್ಚು ಬಳಕೆಗೆ ಬಂದಾವು; ಉಪಕಸಬುಗಳು ಬೆಳೆದಾವು; ಹೀಗಾಗಿ ರೈತನು ಕಾಲಿಗೆ ಜೋಡು, ತಲೆಗೆ ಬಿಸಿಲ ಝಳದಿಂದ ರಕ್ಷಣೆ ಪಡೆಯಲು ದಪ್ಪನೆ ಮುಂಡಾಸು ಧರಿಸಿಯಾನು. ಹರಕುಎಲೆ, ಮಣ್ಣಿನ ತಟ್ಟೆಯಲ್ಲಿ ಅನ್ನ ತಿನ್ನದೆ, ಉತ್ತಮವಾದ ಕಂಚಿನ ಹರಿವಾಣ, ಪಿಂಗಾಣಿ ತಟ್ಟೆ, ಬಳಸಬಹುದು. ಭೂಮಿಯನ್ನು ಒಂದಿಷ್ಟು ಕೆರೆದು ಜೀವ ಹಿಡಿದಿರಲು ಸ್ವಲ್ಪ ದವಸ ಬೆಳೆದು ಬಾಳಿದರೆ ಸಾಕು ಎಂಬ ಮನೋಭಾವನೆ ಬದಲಾಯಿಸೀತು.

ಸಾಕಷ್ಟು ಧನ, ವ್ಯವಸ್ಥಿತ ರೂಪದಲ್ಲಿ ಕಾಲ ಕಾಲಕ್ಕೆ ತಕ್ಕ ಸಹಾಯ, ರೈತನ ಸಾಲದ ಹೊರೆಯಿಳಿಸಿತಗ್ಗಿಸಲು ಜಮೀನು ಅಡಮಾನದ ಬ್ಯಾಂಕುಗಳ ಸ್ಥಾಪನೆ, ಆಧುನಿಕ ವ್ಯವಸಾಯೋಪಕರಣಗಳ ಬಳಕೆ, ರಾಸಾಯನಿಕ ಗೊಬ್ಬರಗಳ ಉಪಯೋಗ, ರಾಸುಗಳ ಅಭಿವೃದ್ಧಿ, ಮಿತವ್ಯಯ ಶಿಕ್ಷಣ ಮೊದಲಾದ ಕ್ರಮಗಳಿಂದ ರೈತನನ್ನೂ ಗ್ರಾಮಗಳನ್ನೂ ಅಭಿವೃದ್ಧಿಗೆ ತರಲು ಸಾಧ್ಯವಾದೀತು. ವ್ಯವಸಾಯೋತ್ಪತ್ತಿಯನ್ನು ಹದಿನೈದು ವರುಷಗಳ ಒಳಗಾಗಿಯೇ ದ್ವಿಗುಣಿಸಬಹುದು.

ಗ್ರಾಮದ ಲಕ್ಷಣ ಹೇಗಿರಬೇಕು? ಆ ಗ್ರಾಮದ ಶೇಕಡಾ ಹತ್ತು ಜನ ಹುಡುಗರಾದರೂ ಶಾಲೆಯಲ್ಲಿ ಓದುತ್ತಿರಬೇಕು. ವಯಸ್ಕರಿಗೂ ಶಿಕ್ಷಣ ವ್ಯವಸ್ಥೆಯಿರಬೇಕು. ಹಳ್ಳಿಯಲ್ಲಿ ಪ್ರತಿಯೊಬ್ಬನಿಗೂ ಕನಿಷ್ಠ ವಾರ್ಷಿಕ ವರಮಾನ ೩೩ ರೂ. ಗಳಾದರು ಇರಬೇಕು. ೩೦೦ ಪ್ರಜಾ ಸಂಖ್ಯೆಯುಳ್ಳ ಪ್ರತಿ ಹಳ್ಳಿಯಲ್ಲಿಯೂ ಒಬ್ಬ ಕಮ್ಮಾರ, ಒಬ್ಬ ಬಡಗಿ. ಪ್ರತಿಯೊಂದು ಸಂಸಾರಕ್ಕೂ ಯಾವುದಾದರೂ ಉಪಕಸುಬು. ೫೦೦ ಪ್ರಜಾ ಸಂಖ್ಯೆಗೆ ಒಂದು ಸಣ್ಣ ಕೈಗಾರಿಕೆ. ಪ್ರತಿ ಕುಟುಂಬವೂ ಎರಡು ವರುಷಗಳಿಗಾಗುವಷ್ಟು ಧಾನ್ಯ ಸಂಗ್ರಹ ಇಡಬೇಕು. ಉತ್ಪಾದನಾ ಕೆಲಸಗಳಿಗಲ್ಲದೆ ಅನ್ಯಥಾ ಸಾಲಮಾಡಲು ಅವಕಾಶ ಕೊಡಲಾಗದು

ಮಲೇರಿಯಾ ಜ್ವರದ ತವರು ಮನೆಯಾಗಿ, ದಿನ ದಿನಕ್ಕೂ ಕ್ಷೀಣಿಸುತ್ತಿದ್ದ ಮಲೆನಾಡಿನ ಗ್ರಾಮಗಳ ಅಭಿವೃದ್ಧಿಗಾಗಿ ಮಲೆನಾಡು ಅಭಿವೃದ್ಧಿ ಸಮಿತಿ, ಗ್ರಾಮಾಭಿವೃದ್ಧಿ ಸಮಿತಿಗಳು ಸ್ಥಾಪಿತವಾದವು ವ್ಯವಸಾಯದ ಅಭಿವೃದ್ಧಿಗಾಗಿ ಪ್ರತ್ಯೇಕ ಇಲಾಖೆಯಾಯಿತು. ಆಧುನಿಕ ವ್ಯವಸಾಯ ಪದ್ಧತಿಯನ್ನು ಜಾರಿಗೆ ತರಲು ಡಾ|| ಕೋಲ್ಮನ್ ಅವರನ್ನು ಬರಮಾಡಿಕೊಳ್ಳಲಾಯಿತು. ಅವರು ಇಲಾಖೆಯ ಮುಖ್ಯಾಧಿಕಾರಿಗಳಾದರು ವ್ಯವಸಾಯ ನಿರೀಕ್ಷಣ ಕ್ಷೇತ್ರಗಳು ಅಲ್ಲಲ್ಲಿ ಸ್ಥಾಪಿತವಾದವು. ಸಹಕಾರ ಸಂಘಗಳು ಏರ್ಪಟ್ಟವು ಹೆಬ್ಬಾಳದಲ್ಲಿ ವ್ಯವಸಾಯ ಶಾಲೆಯಾಯಿತು. ಒಳ್ಳೆಯ ಗೊಬ್ಬರ, ಬೀಜ ಇವುಗಳ ಮಾರಾಟಕ್ಕೆ, ಸೀಮೆ ನೇಗಿಲಿಗೆ ತಕ್ಕ ವ್ಯವಸ್ಥೆಯಾಯಿತು. ೧೧,೯೩೩ ಗ್ರಾಮಗಳಲ್ಲಿ ೧೧,೭೪೦ ಗ್ರಾಮ ಸಮಿತಿಗಳು ಸ್ಥಾಪಿತವಾದುವು. ಗ್ರಾಮ ಪಂಚಾಯಿತಿಗಳೂ ಬಂದವು.

ಸರಕಾರ ಎಷ್ಟೇ ಸಹಾಯ ನೀಡಲಿ, ಗ್ರಾಮೋದ್ಧಾರವು ತನ್ನ ಕೆಲಸ ಎಂದು ಹಳ್ಳಿಯವರು ಸಹಕರಿಸದಿದ್ದರೆ ಯಾವ ಕೆಲಸವೂ ಸಾಧ್ಯವಾಗದು. ಹಳ್ಳಿಯವರಿಗೆ ಹಣ ಕೊಡಲು ಸಾಧ್ಯವಾಗದಿರಬಹುದು. ಆದರೆ ಶಾರೀರಕ ಶ್ರಮದಿಂದಲಾದರೂ ಅವರು ಸೇವೆ ಸಲ್ಲಿಸಬಹುದಲ್ಲವೇ? ಪ್ರತಿವಾರವೂ ಗ್ರಾಮ ನೈರ್ಮಲ್ಯ, ರಸ್ತೆ, ಕೆರೆ, ಕುಂಟೆ ಇವುಗಳ ರಿಪೇರಿ ಮೊದಲಾದ ಸಾರ್ವಜನಿಕ ಕಲಸಗಳಿಗಾಗಿ ಪ್ರತಿಯೊಬ್ಬರೂ ವಾರವಲ್ಲಿ ಅರ್ಧದಿನವಾದರೂ ಮೀಸಲಾಗಿಡಬೇಕೆಂಬುದು ವಿಶ್ವೇಶ್ವರಯ್ಯನವರ ಸಲಹೆಯಾಗಿತ್ತು. ಅದರಂತೆ ಸಂಸ್ಥಾನದಲ್ಲಿ ೬,೧೨೬ ಹಳ್ಳಿಗಳು ಅರ್ಧ ದಿನದ ಸೇವೆ ಸಲ್ಲಿಸಲು ಒಪ್ಪಿಕೊಂಡವು.

ಈ ಕಾಲಕ್ಕೂ ಇದು ಎಷ್ಟು ಉತ್ತಮವಾದ ಸಲಹೆ!

ಗ್ರಾಮಗಳ ಬೆಳವಣಿಗೆಗಾಗಿ ವಿಶ್ವೇಶ್ವರಯ್ಯನವರು ಹೊಸದಾಗಿ ಸಿದ್ಧಗೊಳಿಸಿರುವ ಯೋಜನೆಯನ್ನು ಮೈಸೂರು ಸರಕಾರದವರು ಅಂಗೀಕರಿಸಿ, ಕೆಲವು ಜಿಲ್ಲೆಗಳಲ್ಲಿ ಅದನ್ನು ಕಾರ್ಯರೂಪಕ್ಕೆ ತಂದಿರುತ್ತಾರೆ ಇದಕ್ಕಾಗಿಯೇ ಪ್ರತ್ಯೇಕವಾದ ಗ್ರಾಮಾಭಿವೃದ್ಧಿ ಶಾಖೆ ರಚಿತವಾಗಿದೆ. ಮೈಸೂರು ಸರಕಾರದ ಪ್ರಾರ್ಥನೆಯಂತೆ ವಿಶ್ವೇಶ್ವರಯ್ಯನವರು ಗ್ರಾಮಾಭಿವೃದ್ಧಿ ಸಮಿತಿ ಶಾಖೆಯ ಅಧ್ಯಕ್ಷರಾಗಿ, ಈ ಇಳಿವಯಸ್ಸಿನಲ್ಲೂ ಅತ್ಯಂತ ಶ್ರದ್ಧೋತ್ಸಾಹಗಳಿಂದ ತಮ್ಮ ಯೋಜನೆ ಕಾರ್ಯಗತಮಾಡುವ ಕಾರ್ಯದಲ್ಲಿ ನಿರತರಾಗಿರುತ್ತಾರೆ. ಹಳ್ಳಿ ಹಳ್ಳಿಗೂ ಸುತ್ತುತ್ತಾ, ತಮ್ಮ ಯೋಜನೆಯನ್ನು ಗ್ರಾಮವಾಸಿಗಳಿಗೆ ವಿವರಿಸುತ್ತಾ, ಹಳ್ಳಿಗರನ್ನು ಹುರುಪುಗೊಳಿಸುತ್ತಿದ್ದಾರೆ. ಯೋಜನೆಯ ಕಾರ್ಯ ಕ್ರಮಗಳು ಭರದಿಂದ ಸಾಗುತ್ತಿವೆ.

# ಆರ್ಥಿಕ ಯೋಜನೆ ಮತ್ತು ಸಾಧನೆ

ಗ್ರಾಮಾಭ್ಯುದಯಕ್ಕಾಗಿ ವಿಶ್ವೇಶ್ವರಯ್ಯನವರು ಇಷ್ಟೆಲ್ಲಾ ಶ್ರಮವಹಿಸಿದರೂ, ವ್ಯವಸಾಯ ಮಾತ್ರದಿಂದಲೇ ಈ ಆಧುನಿಕಯುಗದಲ್ಲಿ ಯಾವ ರಾಷ್ಟ್ರವೂ ಐಶ್ವರ್ಯಯುತವೂ, ಪ್ರಭಾವಶಾಲಿಯೂ ಆಗಿ ಬಾಳಲು ಸಾಧ್ಯವಿಲ್ಲ ಎಂಬುವುದು ಅವರ ಖಚಿತಾಭಿಪ್ರಾಯ. ಇದಕ್ಕೆ ಮದ್ದು ಔದ್ಯೋಗೀಕರಣ. ಪ್ರಪಂಚದ ಹತ್ತೂ ರಾಷ್ಟ್ರಗಳು ಒಂದು ಪಥ ಹಿಡಿದು ನಡೆದರೆ, ಭಾರತ ಮಾತ್ರ ತಾನೇ ಪ್ರತ್ಯೇಕ ಮಾರ್ಗ ಅನುಸರಿಸುವುದು ಕೇವಲ ಮೂರ್ಖತನ. ಕೆನಡ, ಅಮೆರಿಕ, ಆಸ್ಟ್ರೇಲಿಯ, ಜರ್ಮ ಮೊದಲಾದ ರಾಷ್ಟ್ರಗಳು ಯಾವ ಆರ್ಥಿಕನೀತಿಯನ್ನನುಸರಿಸಿ ಪ್ರಗತಿಗಾಮಿಗಳಾಗಿವೆಯೋ, ಅದೇ ಮಾರ್ಗವನ್ನನುಸರಿಸಿ ನಡೆಯುವುದರಲ್ಲಿ ಭಾರತಕ್ಕೂ ಕ್ಷೇಮ.

೧೯೨೦ ರಲ್ಲಿ ಮೊಟ್ಟಮೊದಲಾಗಿ ಲಂಡನ್ನಿಂದ ಪ್ರಕಟಿಸಿದ Reconstructing India ಅಥವಾ ಭಾರತದ ಪುನರುಜ್ಜೀವನ ಎಂಬ ಇವರ ಗ್ರಂಥ ಈ ತತ್ವವನ್ನೇ ಪ್ರತಿಪಾದಿಸುತ್ತದೆ.

ಕೈಗಾರಿಕೆಗಳನ್ನು ಮೂರು ಭಾಗಗಳಾಗಿ ವಿಂಗಡಿಸಬಹುದು. ದೊಡ್ಡ ಅಥವಾ ಮೂಲ ಕೈಗಾರಿಕೆ, ಮಧ್ಯಮ ಶ್ರೇಣಿಯ ಕೈಗಾರಿಕೆ, ಸಣ್ಣ ಅಥವಾ ಗ್ರಾಮೋದ್ಯೋಗ. ಗಣಿಗಳಿಂದ ಅದುರಗಳನ್ನು ತೆಗೆದು ಲೋಹವಾಗಿ ಪರಿವರ್ತಿಸುವುದು ; ಕಬ್ಬಿಣ ಉಕ್ಕು ತಯಾರಿಕೆ; ಎಂಜಿನ್, ಪಂಪ್ ಮತ್ತು ಇತರ ಯಂತ್ರಗಳು, ರೈಲುಗಾಡಿ ಮತ್ತು ಅದರ ಉಪಕರಣಗಳ ತಯಾರಿಕೆ ; ಮದ್ದು ಗುಂಡು ಮೊದಲಾದ ಶಸ್ತ್ರ ಉತ್ಪಾದನೆ; ಮೋಟಾರು ಮತ್ತು ವಿಮಾನ; ವ್ಯವಸಾಯದ ಮರ ಮುಟ್ಟುಗಳು ; ವಿದ್ಯುತ್ತಿನ ಯಂತ್ರ ಸಾಧನೆಗಳು ; ಹತ್ತಿ, ಉಣ್ಣೆ, ಸೆಣಬು ಇವುಗಳ ಯಂತ್ರಗಳು; ರಾಸಾಯನಿಕ ವಸ್ತುಗಳು; ಜಹಜು ನಿರ್ಮಾಣ ಇವುಗಳನ್ನು ಮೂಲ ಅಥವಾ ದೊಡ್ಡ ಯಂತ್ರಗಾರಿಕೆ ಶ್ರೇಣಿಗೆ ಸೇರಿಸಬಹುದು. ಈ ದೊಡ್ಡ ಉದ್ಯಮ

ಗಳಿಗೆ ಅಪಾರ ಧನ, ದಕ್ಷವಾದ ಮೇಲ್ವಿಚಾರಣೆ, ಸರಕಾರದ ಸಹಾಯ ಬೇಕು. ಅನುಭವಿಗಳಾದ ಪಾಶ್ಚಿಮಾತ್ಯ ತಜ್ಞರ ಸಹಾಯವನ್ನು ಪ್ರಥಮದಲ್ಲಿ ಪಡೆಯಲೂ ಹಿಂತೆಗೆಯಬಾರದು.

ಕಬ್ಬಿಣ ಕರಗಿಸುವ ಕುಲುಮೆಗಳು; ಉಕ್ಕಿನ ಸಾಮಾನು, ಲೋಹದ ಪದಾರ್ಥಗಳು, ಬಣ್ಣ ಮತ್ತು ರಾಸಾಯನಿಕ ವಸ್ತುಗಳು; ಕಾಗದ, ಸಕ್ಕರೆ, ಬೆಂಕಿಕಡ್ಡಿ, ಸಾಬೂನು, ಮೇಣದ ಬತ್ತಿ, ರಬ್ಬರ್, ಮತ್ತು ಚರ್ಮದ ಸಾಮಾನುಗಳು; ಮುದ್ರಣ, ಫೋಟೊ ಸಾಮಗ್ರಿಗಳು, ಟೈಪ್ ರೈಟರ್, ಗಡಿಯಾರ ಮೊದಲಾದವುಗಳನ್ನು ಮಾಧ್ಯಮ ಶ್ರೇಣಿಗೆ ಸೇರಿಸಬಹುದು.

ಅಲ್ಲಲ್ಲಿ ಮೊಲ್ಕಂಡ ಶ್ರೇಣಿಗೆ ಸೇರಿದ ಕೆಲವು ಕೈಗಾರಿಕೆಗಳಿವೆ. ಆದರೆ ಸಾಲದು. ಸರಕಾರ ಮತ್ತು ಶ್ರೀಮಂತರ ಸಹಾಯ ಸಹಕಾರಗಳಿಂದ ಈ ಗುಂಪಿನ ಉದ್ಯೋಗಗಳನ್ನು ಅಪಾರವಾಗಿ ಬೆಳೆಸಿ, ಹಣ ಗಳಿಸಬಹುದು.

ಮೂರನೆಯ ಶ್ರೇಣಿಗೆ ಸೇರಿದ್ದು ಗ್ರಾಮೋದ್ಯೋಗ ಮತ್ತು ಗೃಹ ಕೈಗಾರಿಕೆ. ಸ್ಥಳೀಯ ಸಂಸ್ಥೆಗಳು, ಗ್ರಾಮ ಪಂಚಾಯಿತಿಗಳು ಮತ್ತು ಖಾಸಗೀ ಮಹನೀಯರ ಸಹಾಯದಿಂದ ಈ ಗುಂಪಿನ ಉದ್ಯೋಗಗಳನ್ನು ಹೆಚ್ಚಿಸಬಹುದು. ಪಾತ್ರೆಗಳ ತಯಾರಿಕೆ, ಕೈಮಗ್ಗ, ನೂಲುವುದು, ನೇಯ್ಗೆ; ಕಂಬಳಿ, ಜಮಖಾನ ಮಾಡುವುದು; ಬತ್ತ ಕುಟ್ಟುವ, ಹಿಟ್ಟು ಬೀಸುವ, ಎಣ್ಣೆ ತೆಗೆಯುವ ಮಿರ್ಷಗಳ ಸ್ಥಾಪನೆ; ಬೀಡಿ, ಸಿಗರೇಟು ಸುತ್ತುವುದು; ಚಾಪೆ ಹೆಣೆಯುವುದು; ಪೆನ್ಸಿಲ್, ಸಾಬೂನು ಗುಂಡಿ, ಗಾಜಿನ ಸಾಮಾನು, ಮುದ್ರಣ, ಬೈಂಡಿಂಗ್ ಈ ಕೆಲಸಗಳು ಮೂರನೆಯ ಶ್ರೇಣಿಗೆ ಸೇರಿದುವು.

ಜರ್ಮನಿಯಲ್ಲಿ ಶೇಕಡ ೯೦ ಉದ್ಯಮಗಳು ಈ ಶ್ರೇಣಿಗೆ ಸೇರಿದ್ದು. ಅಲ್ಲಿ ಐದರಲ್ಲಿ ಎರಡು ಪಾಲು ಜನ ಸಣ್ಣ ಉದ್ಯೋಗಗಳಲ್ಲಿ ನಿರತರಾಗಿರುತ್ತಾರೆ. ಜಪಾನು ಗೃಹ ಕೈಗಾರಿಕೆಗಳಿಗೆ ಮಾತೃ

ಸ್ಥಾನ. ೧೦೦೦ ಕ್ಕೂ ಹೆಚ್ಚು ಕೆಲಸಗಾರರಿರುವ ಗಿರಣಿಗಳು ಸಾವಿರಕ್ಕೆ ಐದು ಸಹ ಇಲ್ಲ ಅಲ್ಲಿ. ಹತ್ತಕ್ಕೂ ಮೀರದ ಕೆಲಸಗಾರರುಳ್ಳ ಸಣ್ಣ ಕೈಗಾರಿಕೆಗಳ ಸಂಖ್ಯೆಯೋ ಅಪಾರ.

ರಾಜಕೀಯ ಸ್ವಾತಂತ್ರ್ಯಗಳಿಸಿದರೂ, ಆರ್ಥಿಕ ಸ್ವಾತಂತ್ರ್ಯವಿಲ್ಲದ ದೇಶಕ್ಕೆ ಸುಖವಿಲ್ಲ ಭಾರತ ಸ್ವಾತ್ರ್ಯಗಳಿಸಿದ ಮೇಲೆ ಆರ್ಥಿಕೋನ್ನತಿಯ ಅನೇಕ ಯೋಜನೆಗಳು ಹೊರಬಿದ್ದಿವೆ. ಸರಕಾರ ಆರ್ಥಿಕೋನ್ನತಿಯ ಪಾಂಚವಾರ್ಷಿಕ ಯೋಜನೆಯನ್ನು ಪ್ರಕಟಿಸಿದೆ. ಆದರೆ ಸ್ವಾತಂತ್ರ್ಯ ಗಳಿಸುವುದಕ್ಕೆ ಮೊದಲು ಆರ್ಥಿಕ ಯೋಜನೆಯ ವಿಚಾರಮಾಡುವವರ ಸಂಖ್ಯೆ ಬಹಳ ವಿರಳವಾಗಿತ್ತು. ಆರ್ಥಿಕ ಯೋಜನೆಯ ನಿರ್ಮಾಪಕರಲ್ಲಿ ಮೊದಲಿನವರು ವಿಶ್ವೇಶ್ವರಯ್ಯನವರು. ಆ ಕಾಲಕ್ಕೆ 'ಆರ್ಥಿಕ ಯೋಜನೆ' ಎಂಬ ಪದವೇ ಹೆಚ್ಚು ಬಳಕೆಗೆ ಬಂದಿರಲಿಲ್ಲ ವಿಶ್ವೇಶ್ವರಯ್ಯನವರದು ಬೃಹದ್ ಯೋಜನೆಗಳು, ಕಲ್ಪನಾತೀತವಾದುವು. ಇದು ಸಾಧ್ಯವೇ ಎಂದು ಎದೆ ಧಕ್ ಎನಿಸುವ ದೊಡ್ಡ ಯೋಜನೆಗಳು. ೨೫ ವರುಷಗಳ ಹಿಂದೆಯೇ ನಮ್ಮ ದೇಶದಲ್ಲಿ ಮೋಟಾರು ಮತ್ತು ವಿಮಾನ ಕಾರ್ಖಾನೆ ಗಳನ್ನು ಸ್ಥಾಪಿಸಬೇಕೆಂದು ಪ್ರಯತ್ನಿಸಿದ ಸಾಹಸಿ. ಇವರು ತಮ್ಮ ಯೋಜನೆಗಳನ್ನು ಕೇವಲ ಪುಸ್ತಕ ರೂಪದಲ್ಲಿ ಕೊಡಲಿಲ್ಲ ಭಾರತೀಯರಿಗೆ ಸಾಧ್ಯವಲ್ಲ ಎಂಬ ಬೃಹದ್ ನಿರ್ಮಾಣ ಕಾರ್ಯಗಳನ್ನು ತಾವು ಮಾಡಿಯೆ ತೋರಿಸಿದರು. ಕೃಷ್ಣರಾಜಸಾಗರ, ಭದ್ರಾವತಿ, ಮೈಸೂರು--ಅರಸೀಕೆರೆ ರೈಲ್ವೆ ಮೊದಲಾದುವು ಅವರ ಚಿರಸ್ಮರಣೀಯ ಸ್ಮಾರಕಗಳು.

## (I) ಕೃಷ್ಣರಾಜಸಾಗರ

ಕೃಷ್ಣರಾಜಸಾಗರ ಅಥವಾ ಕನ್ನಂಬಾಡಿ ಕಟ್ಟೆಯ ಹೆಸರನ್ನು ಕೇಳ ದವರು ಭಾರತದಲ್ಲಿ ಅತಿ ವಿರಳ.

ಮೈಸೂರಿನಿಂದ ೧೨ ಮೈಲಿ ಶ್ರೀರಂಗಪಟ್ಟಣದಿಂದ ನದಿ ದಂಡೆಯ ಮೇಲೆ ೯ ಮೈಲಿ ಮೇಲುಗಡೆ ಕಾವೇರಿ ನದಿಗೆ ಅಡ್ಡವಾಗಿ ಕಟ್ಟೆ ಕಟ್ಟಿ, ಸುಮಾರು ೫೦ ಚದರ ಮೈಲಿ

ವಿಸ್ತಾರವೂ, ೨೫ ಮೈಲಿಗಳ ಉದ್ದವೂ ಆದ ಕೃತಕ ಸರೋವರವನ್ನು ನಿರ್ಮಿಸಲಾಗಿದೆ. ಈ ಕಟ್ಟೆಯ ಕೆಲಸ ೧೯೧೧ ರಲ್ಲಿ ಪ್ರಾರಂಭವಾಗಿ ೧೯೩೧ ರಲ್ಲಿ ಪೂರ್ಣವಾಯಿತು. ಇಲ್ಲಿಗೆ ೭೦ ಮೈಲಿ ಕೆಳಗಡೆ ಇದೇ ಕಾವೇರಿ ನದಿಗೆ ಅಡ್ಡಲಾಗಿ ಕಟ್ಟಿರುವ ಮೆಟ್ಟೂರು ಜಲಾಶಯವನ್ನು ಬಿಟ್ಟರೆ, ಇದಕ್ಕಿಂತ ಹಿರಿದಾದ ಮಾನವ ನಿರ್ಮಿತ ಜಲಾಶಯ ಭಾರತದಲ್ಲಿ ಬೇರೊಂದಿಲ್ಲ. ಮೆಟ್ಟೂರು ಜಲಾಶಯ ಸಿದ್ಧವಾಗುವುದಕ್ಕೆ ಮೊದಲು ನಾಲ್ವಡಿ ಕೃಷ್ಣರಾಜರ ಹೆಸರನ್ನು ತಾಳಿರುವ ಕೃಷ್ಣರಾಜ ಸಾಗರವೇ ಭಾರತದಲ್ಲಿ ಅತ್ಯಂತ ದೊಡ್ಡ ಜಲಾಶಯ. ಈ ಜಲಾಶಯದ ಕಟ್ಟೆಯ ಉದ್ದ ಒಂದೂ ಮುಕ್ಕಾಲು ಮೈಲಿ. ತಳಪಾಯದಿಂದ ಎತ್ತರ ೧೪೦ ಅಡಿ. ಕಟ್ಟೆಯ ತಳದ ಅಗಲ ೧೧೧ ಅಡಿ. ಕಟ್ಟೆಯನ್ನು ಕಟ್ಟಿದುದರಿಂದ ಮುಳುಗಡೆಯಾದ ಜಮೀನಿನ ವಿಸ್ತಾರ ಸುಮಾರು ೧೮,೦೦೦ ಎಕರೆ. ಕಟ್ಟೆ ಕಟ್ಟಲು ಸುಮಾರು ೩೦ ಕೋಟಿ ಘನ ಚದರದಷ್ಟು ಕಲ್ಲು ಮತ್ತು ಗಾರೆ ಬಳಸಲಾಗಿದೆ. ಕಟ್ಟೆಯನ್ನು ಕಟ್ಟಿದ ಕಾಲಕ್ಕೆ ನಮ್ಮ ದೇಶದಲ್ಲಿ ಸಿಮೆಂಟು ತಯಾರಾಗುತ್ತಿರಲಿಲ್ಲ. ಪರದೇಶದಿಂದ ಸಿಮೆಂಟ್ ತರಿಸಬೇಕಾಗಿತ್ತು. ಇದಕ್ಕೆ ಪ್ರತಿಯಾಗಿ ಮೈಸೂರು ಇಂಜಿನಿಯರುಗಳು ನಿರ್ಮಿಸಿದ 'ಸುರ್ಕಿ' ಗಾರೆಯಿಂದಲೇ ಕಟ್ಟೆಯನ್ನು ಕಟ್ಟಲಾಗಿದೆ. ಸುಣ್ಣದೊಡನೆ ಒಂದು ನಿರ್ದಿಷ್ಟ ಪ್ರಮಾಣದಲ್ಲಿ ಇಟ್ಟಿಗೆ ಪುಡಿಯನ್ನು ಬೆರೆಸಿ ನಯವಾಗಿ ಅರೆದ ಈ ಸುರ್ಕಿ ಗಾರೆಯನ್ನು ಸ್ಥಳದಲ್ಲಿಯೇ ತಯಾರಿಸಿ ಬಳಸುತ್ತಾರೆ. ಸಿಮೆಂಟಿಗಿಂತ ಈ ಗಾರೆ ಶ್ರೇಷ್ಠವಾದ್ದೆಂದು ಖಚಿತವಾಗಿದೆ. ಮೊದಲು ಬಾರಿ ಈ ಗಾರೆಯನ್ನು ಬಳಸಿದ್ದು ವಾಣಿವಿಲಾಸ ಸಾಗರ ಕಟ್ಟುವಾಗ. ಅನಂತರ ಕೃಷ್ಣರಾಜ ಸಾಗರ ಕಟ್ಟೆಕಟ್ಟಲು. ಅಲ್ಲಿಂದೀಚೆಗೆ ಮೈಸೂರಿನ ವಾಸ್ತು-ಪ್ರವೀಣರು ಕಂಡು ಹಿಡಿದ ಈ ಸುರ್ಕಿಗಾರೆಯನ್ನು ಅನೇಕ ಜಲಾಶಯಗಳ ನಿರ್ಮಾಣದಲ್ಲಿ ಬಳಸಿದಾರೆ. ಕಟ್ಟೆಯ ಮೇಲೆ ಮೋಟಾರು ಸಂಚಾರಕ್ಕೆ ಅನುಕೂಲವಾಗುವಂತೆ ೧೫ ಅಡಿ ಅಗಲದ ರಸ್ತೆ ಇದೆ.

ಜಲಾಶಯದ ನೀರನ್ನು ಹತೋಟಿಯಲ್ಲಿಟ್ಟು ಬಳಸಲು ಒಟ್ಟು ೧೭೧ ತೂಬುಗಳೂ, ಅಷ್ಟೇ ಬಾಗಿಲುಗಳೂ ಇವೆ. ಈ ತೂಬುಗಳನ್ನು ಬೇರೆ ಬೇರೆ ಎತ್ತರಗಳಲ್ಲಿ ಕಟ್ಟಲಾಗಿದೆ. ನೀರಿನ ಅಗಾಧ ಒತ್ತಡವನ್ನು ತಡೆ

ಯಲು ಈ ಬಾಗಿಲುಗಳು ಬಹಳ ಬಲವಾಗಿರಬೇಕು ಯಂತ್ರ ಮತ್ತು ವಿದ್ಯುತ್ತಿನ ಸಹಾಯದಿಂದ ಭಾರವಾದ ಈ ಬಾಗಿಲುಗಳನ್ನು ಎತ್ತಿ ಇಳಿಸುತ್ತಾರೆ. ೧೩೬ ಬಾಗಿಲು ಭದ್ರಾವತಿಯಲ್ಲಿ ಕಬ್ಬಿಣದಿಂದ ತಯಾರಾದವು, ಮಿಕ್ಕ ಬಾಗಿಲು ಪರದೇಶದಿಂದ ಬಂದವು ಇವುಗಳಲ್ಲಿ ೪೮ ವಿಶ್ವೇಶ್ವರಯ್ಯನವರಿಂದ ಖಡಕವಾಸಲ ಜಲಾಶಯಕ್ಕಾಗಿ ನಿರ್ಮಿತವಾದ ಸ್ವಯಂ ತೆರೆದು ಮುಚ್ಚಿಕೊಳ್ಳುವ 'ಆಟೋಮಾಟಿಕ್' ಬಾಗಿಲುಗಳು. ಜಲಾಶಯದ ನೀರು ೧೨೪ ಅಡಿಗೆ ಮೀರುತ್ತಲೇ ಈ ಬಾಗಿಲುಗಳು ತಾವಾಗಿಯೇ ತೆರೆದು ಹೆಚ್ಚಾದ ನೀರು ಹರಿದು ಹೋಗಲು ಅವಕಾಶ ಕೊಡುತ್ತವೆ. ನೀರಿನ ಮಟ್ಟ ೧೨೪ ಅಡಿಗೆ ಇಳಿಯುತ್ತಲೇ ಬಾಗಿಲುಗಳ ತಾವಾಗಿಯೇ ಹಾಕಿಕೊಳ್ಳುತ್ತವೆ

ಈ ಕಟ್ಟೆಯ ನಿರ್ಮಾಪಕರಾದ ವಿಶ್ವೇಶ್ವರಯ್ಯನವರ ಹೆಸರಿನ ಕಾಲುವೆಯು, ಕಟ್ಟೆಯ ಎಡಭಾಗದಿಂದ ಹೊರಟು ೬೦ ಮೈಲಿಗಳ ಉದ್ದ ಹರಿಯುತ್ತದೆ. ಈ ಕಾಲುವೆ ಕಟ್ಟೆಯಿಂದ ಅನತಿ ದೂರದಲ್ಲಿರುವ ಹುಲಿಕೆರೆ ಎಂಬಲ್ಲಿ ಕಣ್ಣಿಗೆ ಕಾಣದಂತಾಗಿ ಒಂದೂ ಮುಕ್ಕಾಲು ಮೈಲಿ ಉದ್ದದ ಸುರಂಗದಲ್ಲಿ ಹರಿದು ಹೊರಕ್ಕೆ ಬರುತ್ತದೆ ಒಂದು ಸಣ್ಣ ಗುಡ್ಡವನ್ನೇ ಕೊರೆದು ಈ ಜಲಮಾರ್ಗವನ್ನು ಮಾಡಲಾಗಿದೆ. ಇಷ್ಟು ಉದ್ದವಾದ ಭೂಮ್ಯಂತರ್ಗತ ನೀರಾವರಿ ಕಾಲುವೆಯು ಪ್ರಪಂಚದಲ್ಲೇ ಬೇರೆ ಇಲ್ಲ ಅನುಭವಶಾಲಿಗಳಾದ ಆಫ್ಘನರನ್ನು ಈ ಕಷ್ಟದ ಕೆಲಸ ಮಾಡಲು ಕರೆಸಲಾಗಿತ್ತು. ಒತ್ತಡದ ಗಾಳಿಯನ್ನುಪಯೋಗಿಸಿ, ಅದರ ಶಕ್ತಿಯಿಂದ ಕಲ್ಲಿನಲ್ಲಿ ರಂಧ್ರಗಳನ್ನು ಕೊರೆದು, ಸಿಡಿಮದ್ದನ್ನುಪಯೋಗಿಸಿ ಬಂಡೆಗಳನ್ನು ಸೀಳಿ, ಛೇದಿಸಿ ಈ ಜಲ ಮಾರ್ಗವನ್ನು ನಿರ್ಮಿಸಲಾಗಿದೆ ಸುರಂಗದಿಂದ ಹೊರಬರುವ ಕಾವೇರಿಯ ನೀರು ಮಂಡ್ಯ, ಮೈಸೂರು ಜಿಲ್ಲೆಗಳಲ್ಲಿ ಶಾಖೋಪಶಾಖೆಗಳಾಗಿ ಹರಿದು ಬೆಂಗಾಡಾಗಿದ್ದ ಭೂಮಿಯನ್ನು ನಕ್ಕುನಲಿಯುವ ಫಲವತ್ತಾದ ಪ್ರದೇಶವನ್ನಾಗಿ ಮಾಡಿದೆ ಸುಮಾರು ೧,೨೦,೦೦೦ ಎಕರೆಯಲ್ಲಿ ಕಬ್ಬು, ಭತ್ತ ಮೊದಲಾದ ನೀರಾವರಿ ಫಸಲು ಬೆಳೆಯುತ್ತದೆ. ಮಂಡ್ಯದಲ್ಲಿರುವ ಸಕ್ಕರೆ ಕಾರ್ಖಾನೆಗೆ ಈ ನಾಲೆಯ ಆಶ್ರಯದಲ್ಲಿ ಬೆಳೆಯುವ ಕಬ್ಬೇ ಮುಖ್ಯ ಆಧಾರ.

ಕೃಷ್ಣರಾಜಸಾಗರ ಕಟ್ಟೆ, ವಿಶ್ವೇಶ್ವರಯ್ಯ ನಾಲೆ ಈ ಕೆಲಸಗಳಿಗಾಗಿ ಸುಮಾರು ಹತ್ತೂವರೆ ಕೋಟಿ ರೂಪಾಯಿಗಳ ವೆಚ್ಚವಾಗಿದೆ. ಇದರಿಂದ ಮೈಸೂರು ಸರ್ಕಾರಕ್ಕೆ ವರುಷಕ್ಕೆ ವರಮಾನ ಸುಮಾರು ಒಂದೂವರೆ ಕೋಟಿ ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಮೈಸೂರಿನ ಪ್ರಜೆಗಳೂ ಸರ್ಕಾರವೂ ವರ್ಷಂಪ್ರತಿ ೧೫ ಕೋಟಿ ರೂ. ಗಳಿಸುತ್ತಾರೆಂದು ಅಂದಾಜು ಮಾಡಲಾಗಿದೆ.

ಕನ್ನಂಬಾಡಿ ಕೇವಲ ನೀರಾವರಿ ಯೋಜನೆ ಮಾತ್ರವಲ್ಲ;ವಿದ್ಯುಚ್ಛಕ್ತಿಯ ಉತ್ಪತ್ತಿಯೂ ಸಹ. ಕನ್ನಂಬಾಡಿ ಕಟ್ಟೆ ಕಟ್ಟುವ ಮೊದಲು ೧೩,೦೦೦ ಅಶ್ವಬಲದ ವಿದ್ಯುತ್‌ಶಕ್ತಿ ಶಿವಸಮುದ್ರದಲ್ಲಿ ಉತ್ಪನ್ನವಾಗಿ, ಅದರಲ್ಲಿ ೧೧,೦೦೦ ಅಶ್ವಬಲದಷ್ಟು ಕೋಲಾರದ ಚಿನ್ನದಗಣಿಗಳಿಗೆ ವ್ಯಯವಾಗುತ್ತಿತ್ತು. ಕಾವೇರಿಯಲ್ಲಿ ಹರಿಯುತ್ತಿದ್ದ ಸೀರು ಶಿವಸಮುದ್ರದಲ್ಲಿ ಒಂದೇ ಮಟ್ಟವಾಗಿಲ್ಲದೆ, ಋತುವಿನಂತೆ ಬದಲಾಯಿಸುತ್ತಿದ್ದು ವಿದ್ಯುತ್ ಉತ್ಪಾದನೆಯೂ ಸಹ ಒಂದೇ ಸಮನಾಗಿರುತ್ತಿರಲಿಲ್ಲ. ೧೯೦೩ ರಿಂದ ೧೯೧೪ ರವರೆಗೆ ನಾಕಷ್ಟು ವಿದ್ಯುತ್‌ಶಕ್ತಿಯನ್ನು ಒದಗಿಸಲಾರದೆ, ಮೈಸೂರು ಸರ್ಕಾರವು ಚಿನ್ನವಗಣಿಗಳ ಜಾನ್‌ಟೇಲರ್ ಕಂಪನಿಗೆ ೩೮,೦೦೦ ಪೌಂಡುಗಳ ಪರಿಹಾರ ದ್ರವ್ಯ ಕೊಡಬೇಕಾಯಿತು ಈ ಕಂಪನಿಯವರು ಇನ್ನೂ ಹೆಚ್ಚಿನ ವಿವ್ಯಚ್ಛಕ್ತಿ ಬೇಡುತ್ತಿದ್ದರು. ಹೆಚ್ಚು ಹಣ ಕೊಡುವುದಕ್ಕೂ ಸಿದ್ಧರಾಗಿದ್ದರು. ಮೊದಲ ಐದು ವರುಷ ೫,೦೦೦, ಎರಡನೇ ಐದು ವರುಷದಿಂದ ೧೦,೦೦೦ ಅಶ್ವಶಕ್ತಿಯಷ್ಟು ತೆಗೆದುಕೊಳ್ಳಲು ಸಿದ್ಧರಾಗಿದ್ದರು. ಕೃಷ್ಣರಾಜಸಾಗರ ಕಟ್ಟೆಯನ್ನು ಕಟ್ಟುವುದರಿಂದ ಶಿವಸಮುದ್ರಕ್ಕೆ ಸದಾ ಕಾಲದಲ್ಲಿಯೂ ಸಾಕಷ್ಟು ನೀರನ್ನು ಒದಗಿಸುತ್ತಾ, ಒಂದೇ ಪ್ರಮಾಣದಲ್ಲಿ ವಿದ್ಯುತ್‌ಶಕ್ತಿ ಒದಗಿಸಲು ಸಾಧ್ಯವಾಯಿತು. ಶಿವಸಮುದ್ರ ಮತ್ತು ಶಿಂಷಾ ಜಲಪಾತಗಳಿಂದ ಒಟ್ಟು ೮೦,೦೦೦ ಅಶ್ವಶಕ್ತಿಯ ವಿದ್ಯುತ್‌ನ್ನು ಉತ್ಪತ್ತಿಗೊಳಿಸುವ ಅಂದಾಜು ಮಾಡಲಾಗಿತ್ತು. ಈಗ ಅಷ್ಟು ಶಕ್ತಿ ಉತ್ಪನ್ನವಾಗುತ್ತಿದೆ.

ಕನ್ನಂಬಾಡಿ ಜಲಾಶಯದ ನಿರ್ಮಾಣದಲ್ಲಿ ವಿಶ್ವೇಶ್ವರಯ್ಯನವರು ತೋರಿಸಿದ ಧೈರ್ಯ--ಸ್ಥೈರ್ಯ, ಎದೆಗಾರಿಕೆ, ದೂರದೃಷ್ಟಿ, ಇಂಜನಿಯ

ರಿಂಗ್ ಕಲಾನೈಪುಣ್ಯ ಲೋಕವಿಖ್ಯಾತಿಗಳಿಸಿವೆ. ಪ್ರಪಂಚದ ಅನೇಕ ಭಾಗ ಗಳಲ್ಲಿ ಪರ್ಯಟನಮಾಡಿ, ಹಲವಾರು ದೊಡ್ಡ ದೊಡ್ಡ ಜಲಾಶಯಗಳ ನಿರ್ಮಾಣವನ್ನು ಚೆನ್ನಾಗಿ ಪರಿಶೀಲಿಸಿದ್ದ ಅವರಿಗೆ ಇದರ ಯೋಜನೆ-ನಕ್ಷೆ ತಯಾರಿಸಲು ಹೆಚ್ಚುಕಾಲ ಬೇಕಾಗಲಿಲ್ಲ ಛೀಫ್ ಇಂಜನಿಯರಾಗಿದ್ದಾಗಲೇ ಯೋಜನೆ, ಅಂದಾಜು ವೆಚ್ಚ ಪಟ್ಟಿಗಳನ್ನು ಸಿದ್ಧಗೊಳಿಸಿ ಸರ್ಕಾರಕ್ಕೆ ಒಪ್ಪಿಸಿದ್ದರು. ಮೊದಲ ಅಂದಾಜು ೨೫೩ ಲಕ್ಷ ರೂಪಾಯಿ. ಇಷ್ಟು ಭಾರಿ ಸರಿಸುಮಾರು ಆಗಿನ ಒಂದು ವರುಷದ ರಾಜ್ಯಾದಾಯ ವೆಚ್ಚ ಮಾಡಲು ಯಾರಿಗೆತಾನೆ ಧೈರ್ಯ ಆಗ ದಿವಾನರಾಗಿದ್ದ ಟಿ. ಆನಂದ ರಾಯರಿಗೇನೋ ಉತ್ಸಾಹವೇ ಆದರೆ ಇತರ ಅಧಿಕಾರಿಗಳಿಗೆ ಅಷ್ಟು ಉತ್ಸಾಹವಿರಲಿಲ್ಲ. ಇಷ್ಟು ಭಾರಿ ಯೋಜನೆಯ ಕಲ್ಪನೆಯೇ ಯಾರಿಗೂ ಹೊಳೆಯದು. ಎದೆ ಝಲ್ಲೆನ್ನುವುದು. ಇಷ್ಟು ಹಣವೂ ಎಲ್ಲಿ ನೀರಿನ ಪಾಲಾದೀತೋ ಎಂಬ ಶಂಕೆ ಬೇರೆ. ಶ್ರೀಮನ್ಮಹಾರಾಜಾ ಸರ್ಕಾರದವರು ಈ ಯೋಜನೆಯನ್ನು ಕೈಗೊಳ್ಳುವುದು ಸಂದೇಹವಾಗಿ ತೋರಿಬರಲು, ಉತ್ಸಾಹ ಭಂಗವಾಗಿ ವಿಶ್ವೇಶ್ವರಯ್ಯನವರು ರಜಾ ಪಡೆದು ಉತ್ತರ ದೇಶದ ಪ್ರವಾಸಕ್ಕೆ ಹೊರಟು ಹೋದರು. ಪ್ರವಾಸದಿಂದ ಹಿಂತಿರುಗಿ ಬಂದ ಮೇಲೂ ವಾತವರಣದಲ್ಲಿ ಯಾವ ಬದಲಾವಣೆಯೂ ಕಾಣಲಿಲ್ಲ. ಜಿಗುಪ್ಸೆಯಿಂದ ಕೆಲಸಕ್ಕೆ ರಾಜಿನಾಮೆ ಕೊಡಬೇಕೆಂಬ ಯೋಚನೆಯೂ ಬಂದಿತು. ನಿರ್ವಾಹವಿಲ್ಲದೆ ಅರೆಮನಸ್ಸಿನಿಂದ ದಿನಚರಿಯ ಕೆಲಸಗಳನ್ನು ನಿರ್ವಹಿಸಿಕೊಂಡು ಬರುತ್ತಿದ್ದರು.

ಇವರಲ್ಲಿ ಆದ ಪರಿವರ್ತನೆಯು ಸದಾ ಜಾಗರೂಕರಾದ ಮಹಾರಾಜರ ಗಮನಕ್ಕೆ ಬಾರದೆ ಹೋಗಲಿಲ್ಲ. ದೊರೆಗಳು ವಿಶ್ವೇಶ್ವರಯ್ಯನವರನ್ನು ಕರೆ ಕಳಿಸಿ ಅವರ ನಿರುತ್ಸಾಹದ ಕಾರಣವನ್ನು ಕೇಳಿ ತಿಳಿದರು. "ದುಡಕ ಬೇಡ, ನಿನ್ನ ಅಭಿಲಾಷೆ ನಡೆಸಿಕೊಡುವೆನು" ಎಂದು ಮಹಾಸ್ವಾಮಿಗಳು ಅಭಯವಿತ್ತರು. ಹಾಗೆಯೇ ನಡೆಸಿಕೊಟ್ಟರು.

ಆದರೆ ಕೆಲಸ ಅಷ್ಟು ಸುಗಮವಾಗಲಿಲ್ಲ. ಕನ್ನಂಬಾಡಿಯಿಂದ ೬೦ ಮೈಲಿ ಕೆಳಭಾಗದಲ್ಲಿ ಮೆಟ್ಟೂರಿನ ಬಳಿ ಕಾವೇರಿಗೆ ಅಡ್ಡಲಾಗಿ ಕೃಷ್ಣರಾಜ

ಸಾಗರವನ್ನೂ ಮೀರಿಸುವ ಬಹು ಭಾರೀ ಜಲಾಶಯವನ್ನು ನಿರ್ಮಿಸ ಬೇಕೆಂದು ಮದರಾಸು ಸರಕಾರ ಯೋಚಿಸಿತ್ತು. ಕನ್ನಂಬಾಡಿಯ ಬಳಿ ಕಟ್ಟೆ ಕಟ್ಟುವುದರಿಂದ ತಮ್ಮ ಜಲಾಶಯಕ್ಕೆ ಸಾಕಷ್ಟು ನೀರು ಒದಗದೆ ಹೋಗಬಹುದೆಂಬ ಚಿಂತೆ ಮದರಾಸು ಸರಕಾರಕ್ಕೆ. ಅಲ್ಲದೆ ೧೮೯೨ನೇ ಇಸವಿಯ ಒಪ್ಪಂದದ ಪ್ರಕಾರ ಮದರಾಸು ಸರ್ಕಾರದ ಅನುಮತಿಯೂ ಇದಕ್ಕೆ ಅವಶ್ಯಕವಾಗಿತ್ತು. ಇದೇ ಸಮಯದಲ್ಲಿ ಮೈಸೂರಿನಲ್ಲಿಯೂ ಹಲವು ಜನರಿಗೆ ಇಷ್ಟು ಭಾರೀ ಪ್ರಮಾಣದಲ್ಲಿ ಹಣ ವೆಚ್ಚ ಮಾಡುವುದು ಸರಿಯಲ್ಲ ವೆಂಬ ಭಾವನೆಯಿತ್ತು. ಮದರಾಸು ಸರ್ಕಾರವು ಶಿವಸಮುದ್ರದಲ್ಲಿ ವಿದ್ಯು ದುತ್ಪಾದನೆಗೆ ಸಾಕಷ್ಟು ನೀರು ಮಾತ್ರ ದೊರೆಯುವಂತೆ ೮೧ ಅಡಿ ಕಟ್ಟೆ ಕಟ್ಟಲು ಸಮ್ಮತಿಸಿತು. ಇದರಿಂದ ನೀರಾವರಿಗೆ, ಬೇಸಾಯಕ್ಕೆ ಪ್ರಯೋ ಜನವಾಗುವಂತಿರಲಿಲ್ಲ.

ಕೋಲಾರದ ಚಿನ್ನದ ಗಣಿಗೆ ೧೯೧೫ ಜುಲೈ ಒಳಗಾಗಿ ಹೆಚ್ಚಿನ ವಿದ್ಯುತ್ತನ್ನು ಒದಗಿಸುವುದಾಗಿ ಮೈಸೂರು ಸರ್ಕಾರ ಭರವಸೆ ನೀಡಿತ್ತು. ಅದರಂತೆ ಕರಾರೂ ಆಗಿತ್ತು. ನವಂಬರ್ ೧೯೧೧ ರಲ್ಲಿ ಕಟ್ಟೆಯ ಕೆಲಸ ಶುಭ ಮುಹೂರ್ತದಲ್ಲಿ ಪ್ರಾರಂಭವಾಯಿತು. ೧೦,೦೦೦ ಕ್ಕೂ ಹೆಚ್ಚು ಕೆಲಸ ಗಾರರು ಕಲ್ಲು, ಗಾರೆ, ಮರಳು ಹೊತ್ತು ತಂದು ಕಾವೇರೀ ನದಿಯನ್ನೇ ತಡೆದು ಬಿಡುತ್ತಾರೇನೋ ಎಂಬಂತೆ ಕೆಲಸಮಾಡತೊಡಗಿದರು. ಆದರೂ ಸಕಾಲದಲ್ಲಿ ಕೆಲಸ ಮುಗಿದು ವಿದ್ಯುಚ್ಛಕ್ತಿಯು ತಮಗೆ ಒದಗೀತೆಂದು ಜಾನ್ ಟೇಲರ್ ಕಂಪೆನಿಯವರು ನಂಬಿರಲಿಲ್ಲ. ತಾವೇ ಪ್ರತ್ಯೇಕ ವಿದ್ಯುತ್ ಉತ್ಪಾದಿಸುವ ಯೋಚನೆಯಲ್ಲಿದ್ದರು. ಆದರೆ ವಿಶ್ವೇಶ್ವರಯ್ಯನವರ, ಅವರ ಅಧೀನದಲ್ಲಿ ಕೆಲಸ ಮಾಡಿದ ಇಂಜಿನಿಯರರ, ಇತರ ಕೆಲಸಗಾರರ ಉತ್ಸಾ ಹವು ಸಕಾಲದಲ್ಲಿ ಕೆಲಸವನ್ನು ಜಯಪ್ರದವಾಗಿ ಮಾಡಿಸಿಕೊಟ್ಟಿತು.

ಈ ಕೆಲಸದ ಪ್ರಾರಂಭದಲ್ಲಿ ವಿಶ್ವೇಶ್ವರಯ್ಯನವರು ಅಪಾರ ಸಾಹಸ, ಧೈರ್ಯ ತೋರಿಸಿದರು. ಮದರಾಸು ಸರಕಾರ ಸಮ್ಮತಿ ಕೊಟ್ಟಿದ್ದು ೮೦ ಅಡಿ ಎತ್ತರದ ಕಟ್ಟೆಗೆ ವಿಶ್ವೇಶ್ವರಯ್ಯನವರು ಪ್ರಾರಂಭಿಸಿದ್ದು ೧೩೦ ಅಡಿ ಎತ್ತರದ ಕಟ್ಟೆಯ ಕೆಲಸ ಅಡಿಪಾಯದ ಅಗಲ ೧೧೧ ಅಡಿ. ತಮ್ಮ ವಾದದಲ್ಲಿ ತಮ್ಮ ಕೆಲಸದ ಧಾರ್ಮಿಕತೆಯಲ್ಲಿ ಅಷ್ಟು ಗಾಢ ನಂಬಿಕೆ

ವಿಶ್ವಾಸ ಅವರಿಗೆ. ೮೦ ಅಡಿ ಮಟ್ಟದ ಹೆಚ್ಚಿನ ಎತ್ತರಕ್ಕೆ ಅನುಮತಿ ದೊರೆಯದೆ ಹೋದರೆ ನದಿಯ ಕೆಳಗೆ ಅಡಿಪಾಯಕ್ಕಾಗಿ ಹಾಕಿದ ೬೫ ಲಕ್ಷ ರೂಪಾಯಿಗಳು ಮಣ್ಣು ಪಾಲು! 'ನಮ್ಮ ವಾದ ಸರಣಿಯಲ್ಲಿ, ನಮ್ಮ ಹಕ್ಕಿನಲ್ಲಿ ಸತ್ಯವಿದೆ ಎಂಬ ಧೈರ್ಯ ಈ ದಿಟ್ಟತನದ ಕೆಲಸಕ್ಕೆ ನನ್ನನ್ನು ಪ್ರೇರೇಪಿಸಿತು' ಎನ್ನುತ್ತಾರೆ ವಿಶ್ವೇಶ್ವರಯ್ಯನವರು. ಅದೇನು ಎದೆಗಾರಿಕೆ! ಕಟ್ಟಕಡೆಗೆ "ಸತ್ಯವಿದ್ದರೆ ಎತ್ತಲೂ ಭಯವಿಲ್ಲ" ಎಂಬ ನಾಣ್ಣುಡಿಯಂತೆ ಅವರ ಧೈರ್ಯಕ್ಕೇ ಜಯ ದೊರೆಯಿತು. ಇಂಡಿಯಾ ಸರ್ಕಾರವು ನೇಮಿಸಿದ ಪಂಚಾಯತಿಯು ೧೩೦ ಅಡಿಗಳ ಎತ್ತರದ ಕಟ್ಟೆಕಟ್ಟಲು ಮೈಸೂರು ಸರ್ಕಾರಕ್ಕೆ ಅನುಮತಿ ಕೊಟ್ಟಿತು.

ಕಾವೇರಿ ನದಿಗೆ ಕಟ್ಟಿರುವಷ್ಟು ಕಟ್ಟೆಗಳನ್ನು ಇಷ್ಟೇ ಉದ್ದದ ಬೇರೆ ಯಾವ ನದಿಗೂ ಕಟ್ಟಿಲ್ಲವಂತೆ. ಕನ್ನಂಬಾಡಿ ಕಟ್ಟೆಯಿಂದ ಮೆಟ್ಟೂರಿನ ಜಲಾಶಯಕ್ಕಾಗಲಿ, ಮದರಾಸು ಪ್ರಾಂತದಲ್ಲಿ ಕಾವೇರಿ ಕೆಳಗಿನ ನಿರಾವರಿ ಕೆಲಸಕ್ಕೆ ಯಾವ ತೊಂದರೆಯೂ ಆಗದು ಎಂದು ಅಂಕಿ ಅಂಶಗಳಿಂದ ತಮ್ಮ ವಾದವನ್ನು ಅವರು ಸಮರ್ಥಿಸಿ ದೃಢಪಡಿಸಿದ್ದರು. ಕನ್ನಂಬಾಡಿ ಕಟ್ಟೆಯನ್ನು ಕಟ್ಟುವುದರಿಂದ ಮದರಾಸಿಗೆ ಅನುಕೂಲವೇ ವಿನಾ ಪ್ರತಿಕೂಲವಿಲ್ಲ ಕಟ್ಟೆ ಕಟ್ಟದೆ ಮೈಸೂರಿನವರು ಕಾವೇರಿ ನೀರಿನ ಪ್ರಯೋಜ ಪಡೆಯುವಂತಿಲ್ಲ ಏಕೆಂದರೆ, ಕಾವೇರಿ ಮೈಸೂರು ಸಂಸ್ಥಾನದಲ್ಲಿ ಬಹು ತಗ್ಗಿನಲ್ಲಿ ಹರಿಯುತ್ತದೆ. ನೀರಿನ ಮಟ್ಟವನ್ನು ಎತ್ತರಿಸದೆ ಹೋದರೆ ನೀರು ವ್ಯರ್ಥವಾಗಿ ಸಮುದ್ರಕ್ಕೆ ಹರಿದು ಹೋಗುತ್ತದೆ. ಕಾವೇರಿಯ ನೀರನ್ನು ನೂರಕ್ಕೆ ೯೨ ಭಾಗ ಬಳಸುವವರು ಮದರಾಸಿನವರು. ಮೈಸೂರಿನವರು ಬಳಸುತ್ತಿರುವುದು ಕೇವಲ ೮ ಭಾಗ. ಕಾವೇರಿ ನೀರಿನಿಂದ ಮೈಸೂರಿನಲ್ಲಿ ಸಾಗುವಳಿಯಾಗುತ್ತಿದ್ದುದು (ಕನ್ನಂಬಾಡಿ ಕಟ್ಟುವ ಮೊದಲು) ೧,೧೫,೦೦೦ ಎಕರೆಗಳು; ಮದರಾಸು ಪ್ರಾಂತದಲ್ಲಿ ೧೨,೫೫,೫೦೦ ಎಕರೆ. ಕನ್ನಂಬಾಡಿ ಕಟ್ಟೆಯನ್ನು ಕಟ್ಟುವುದರಿಂದ ೪೮,೦೦೦ ಮಿಲಿಯನ್ (ದಶಲಕ್ಷ) ಘನ ಅಡಿ ನೀರನ್ನು ತಡೆಯಬಹುದು. ಇದರಿಂದ ೧,೫೦,೦೦೦ ಎಕರೆ ಸಾಗುವಳಿ ಮಾಡಬಹುದು ಮೆಟ್ಟೂರು ಜಲಾಶಯವು ೯೫,೬೬೦ ಮಿಲಿಯ ಘನ ಅಡಿಗಳ, ಅಂದರೆ ಕೃಷ್ಣರಾಜಸಾಗರದ ಎರಡರಷ್ಟು ನೀರನ್ನು ತಡೆದು ೩,೨೦,೦೦೦ ಎಕರೆಗಳಿಗೆ ನೀರು ಕೊಡಬಲ್ಲದು.

ಇಂಡಿಯಾ ಸರ್ಕಾರವೂ, ಮದರಾಸು ಸರ್ಕಾರವೂ ಈ ವ್ಯಾಜ್ಯವನ್ನು ಪರಿಹರಿಸಲು ಗೊತ್ತು ಮಾಡಿದ್ದ ಪಂಚಾಯತಿ ಈ ವಾದವನ್ನು ಒಪ್ಪಲೇ ಬೇಕಾಯಿತು. ೧೩೦ ಅಡಿ ಎತ್ತರದ ಕಟ್ಟೆಯನ್ನು ಕಟ್ಟಲು ಮೈಸೂರು ಸರ್ಕಾರಕ್ಕೆ ಅನುಮತಿ ದೊರೆಯಿತು. ಕಟ್ಟೆಯ ಕೆಲಸವು ವಿಶ್ವೇಶ್ವರಯ್ಯನವರ ಅಧಿಕಾರಾವಧಿಯಲ್ಲೇ ಮುಗಿಯಲಿಲ್ಲ ಅವರು ಕೆಲಸದಿಂದ ನಿವೃತ್ತರಾಗುತ್ತಲೇ ಈ ಪ್ರಶ್ನೆ ಲಂಡನ್ನಿನಲ್ಲಿರುವ ಇಂಡಿಯಾ ಸರ್ಕಾರದ ಕಾರ್ಯದರ್ಶಿಗಳ ಪುನರ್ವಿಮರ್ಶೆಗೆ ಮತ್ತೆ ಹೋಯಿತು. ಐದು ವರ್ಷಗಳಾಯಿತು ವ್ಯಾಜ್ಯ ಕೊನೆಗಾಣಲು. ನಿವೃತ್ತರಾದ ಮೇಲೂ ಮೈಸೂರು ಸರ್ಕಾರವು ಈ ವಿಷಯದಲ್ಲಿ ವಿಶ್ವೇಶ್ವರಯ್ಯನವರ ಸಲಹೆ ಪಡೆಯುತ್ತಲೇ ಇದ್ದಿತು ಕಡೆಗೆ ವಿಶ್ವೇಶ್ವರಯ್ಯನವರ ನ್ಯಾಯವಾದ ವಾದಕ್ಕೆ ಜಯ ದೊರೆಯಿತು

ಕಟ್ಟೆಯ ಕೆಳಭಾಗದಲ್ಲಿ ಸೃಜಿಸಿರುವ ಬೃಂದಾವನವು ಜಗತ್ಪ್ರಸಿದ್ಧವಾದ ಪ್ರೇಕ್ಷಣೀಯ ವಿಹಾರ ಸ್ಥಾನ ಜಳಜಳನೆ ಹರಿಯುವ ಝರಿಗಳು, ಸಹಸ್ರಾರು ಕೈಗಳಿಂದ ಚಂಡಾಟವಾಡುವಂತೆ ಮೇಲಕ್ಕೆ ಚಿಮ್ಮುವ ನೀರಿನ ಬುಗ್ಗೆಗಳು, ಬಣ್ಣಬಣ್ಣದ ಕೈದೋಟಗಳು ಮನವನ್ನು ಸೂರೆಗೊಳ್ಳುತ್ತವೆ. ರಾತ್ರಿಯಲ್ಲಿ ಬಣ್ಣದ ವಿದ್ಯುದ್ದೀಪಗಳು ಈ ಸೊಬಗಿಗೆ ಮತ್ತಷ್ಟು ಕಳೆ ಕಟ್ಟುತ್ತವೆ. ಪ್ರಪಂಚದಲ್ಲೇ ಸಾಟಿಯಿಲ್ಲದ ವನವಿಹಾರವೆಂದು ಬೃಂದಾವನವು ಖ್ಯಾತಿಗಳಿಸಿದೆ.

# ಭದ್ರಾವತಿ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ

ವಿಶ್ವೇಶ್ವರಯ್ಯನವರು ಕೈಗೊಂಡ ಮತ್ತೊಂದು ಮಹತ್ತರವಾದ ಉದ್ಯಮ ಭದ್ರಾವತಿ ಕಬ್ಬಿಣದ ಕಾರ್ಖಾನೆ. ಭದ್ರಾವತಿಗೆ ಸಮೀಪ ಬಾಬಾ ಬುಡನಗಿರಿ ಶ್ರೇಣಿಯಲ್ಲಿ ಕಬ್ಬಿಣದ ಅದಿರು ಸಿಗುತ್ತದೆಂದು ಭೂಗರ್ಭಶಾಸ್ತ್ರದವರಿಗೆ ತಿಳಿದಿತ್ತು. ಕಬ್ಬಿಣದ ಅದಿರು ದೊರೆತರೂ ಅದನ್ನು ಕರಗಿಸಿ ಕಬ್ಬಿಣವಾಗಿ ಮಾಡಲು ಕಲ್ಲಿದ್ದಲು ಸಮೀಪದಲ್ಲಿಲ್ಲ. ದೂರ ಪ್ರದೇಶಗಳಿಂದ ಕಲ್ಲಿದ್ದಲು ತಂದು ಕಬ್ಬಿಣ ಮಾಡುವುದು ಲಾಭದಾಯಕವಲ್ಲ. ಭಾರತದಲ್ಲಿ ಟಾಟಾ ಕಂಪೆನಿ ವಿನಾ ಕಬ್ಬಿಣ ಮತ್ತು ಉಕ್ಕು ತಯಾರಿಸುವ ಪ್ರಯತ್ನ ಎಲ್ಲಿಯೂ ನಡೆದಿರಲಿಲ್ಲ. ೧೯೧೪ರಲ್ಲಿ ಘೋರವಾದ ಮಹಾ ಸಂಗ್ರಾಮ ಮೊದಲಾಗಿ ಕಬ್ಬಿಣ ಮತ್ತು ಉಕ್ಕಿನ ಅಭಾವ ಬಹಳವಾಯಿತು. ಹೀಗಿದ್ದರೂ ಅದಿರನ್ನು ಬಳಸುವುದು ಸಾಧ್ಯವೆಂದು ಯಾರಿಗೂ ತೋರಲಿಲ್ಲ.

ಅಮೆರಿಕ, ಸ್ವೀಡನ್, ಜರ್ಮನಿಗಳಲ್ಲಿ ಸುತ್ತಿ ಬಂದಿದ್ದ ವಿಶ್ವೇಶ್ವರಯ್ಯನವರಿಗೆ ಒಂದು ಯೋಚನೆ ಹೊಳೆಯಿತು. ಮೈಸೂರಿನಲ್ಲಿ ಅರಣ್ಯ ಸಂಪತ್ತು ಅಪಾರವಾಗಿದೆ. ಪಶ್ಚಿಮ ಘಟ್ಟದ ಕಾಡುಗಳು ದೊಡ್ಡದೊಡ್ಡ ಮರಗಳಿಂದ ನಿಬಿಡವಾಗಿದೆ. ಈ ಮರಗಳನ್ನು ಕಡಿದು, ಇದ್ದಿಲಾಗಿ ಪರಿವರ್ತಿಸಿ, ಆ ಇದ್ದಿಲನ್ನೇ ಕಬ್ಬಿಣದ ಅದಿರನ್ನು ಕಬ್ಬಿಣವಾಗಿ ಕರಗಿಸಲು ಉಪಯೋಗಿಸಬಹುದಲ್ಲವೆ? ಯೋಚಿಸಿದ್ದೇ ಸರಿ, ಯೋಜನೆಯೂ ಸಿದ್ಧವಾಯಿತು. ಅಮೆರಿಕದ ಮಾರ್ಷಲ್ ಮತ್ತು ಪೆರಿನ್ ಕಂಪೆನಿಯವರೂ ಭಾರತದ ಟಾಟಾ ಕಂಪನಿಯವರೂ ಸಹವರ್ತಿಸಿ ಕಬ್ಬಿಣ ಕಾರ್ಖಾನೆಯನ್ನು ಸಿದ್ಧಮಾಡಿ ಕೊಡಬೇಕೆಂದು ಒಪ್ಪಂದವಾಯಿತು. ಮೇ ೧೯೧೮ ರಲ್ಲಿ ಕಾರ್ಖಾನೆ ಸ್ಥಾಪನೆಯ ಕೆಲಸ ಮೊದಲಾಯಿತು. ೧೯೧೯ರ ಒಳಗಾಗಿ ಕಾರ್ಖಾನೆ ಸ್ಥಾಪಿತವಾಗಿ ಕೆಲಸಕ್ಕೆ ಮೊದಲಾಗಬೇಕೆಂದೇ ಒಪ್ಪಂದ. ಆದರೆ ದಕ್ಷರಾದ ವಿಶ್ವೇಶ್ವರಯ್ಯನವರು ಅಧಿಕಾರದಿಂದ ನಿವೃತ್ತರಾಗುತ್ತಲೇ ಈ ಕೆಲಸವೂ ಹಿಂದೆ ಬಿತ್ತು. ೧೯೨೦ಕ್ಕೆ ಮುಗಿಯಬೇಕಾಗಿದ್ದ ಕಾರ್ಖಾನೆಯ ಕಟ್ಟೋಣ, ಹಾಗೂ ಹೀಗೂ ೧೯೨೩ಕ್ಕೆ ಪೂರ್ತಿಯಾಯಿತು.

ಆದರೆ ಇಷ್ಟುವೇಳೆಗೆ ಪ್ರಪಂಚದ ಪರಿಸ್ಥಿತಿಯಲ್ಲಿ ಬಹಳ ಬದಲಾವಣೆಗಳಾಗಿ ಹೋಗಿದ್ದುವು ಪ್ರಪಂಚದ ಯುದ್ಧ ಮುಗಿದಿತ್ತು. ಧಾರಣೆಗಳೆಲ್ಲ ಸಹಜವಾಗಿ ಇಳಿದುಹೋಗಿದ್ದುವು. ಈ ಪರಿಸ್ಥಿತಿಯನ್ನು ಕಂಡು ಸಲಹೆಗಾರರಾದ ಮಾರ್ಷಲ್ ಮತ್ತು ಪೆರಿ ಕಂಪನಿಯವರು ಈಗ ಭದ್ರಾವತಿ ಕಾರ್ಖಾನೆ ಕೆಲಸ ಪ್ರಾರಂಭಿಸುವುದು ಬೇಡ. ಕಬ್ಬಿಣದ ಬೆಲೆ ಏರುವವರೆಗೆ ಸಾವಕಾಶ ಮಾಡುವುದೇ ಮೇಲು ಇಲ್ಲವಾದರೆ ಸರ್ಕಾರಕ್ಕೆ ಲಾಭ ಬಾರದು ಕಬ್ಬಿಣದ ಬೆಲೆ ಏರುತ್ತಲೇ ಕೆಲಸ ಪ್ರಾರಂಭಿಸಬಹುದು ಎಂದರು.

ಎಂತಹ ಸಂಕಟದ ಪರಿಸ್ಥಿತಿ. ಭಾರಿ ಪ್ರಮಾಣದಲ್ಲಿ ಅದಿರಿನಿಂದ ಕಬ್ಬಿಣ ತಯಾರಿಸುವುದೇ ಭಾರತಕ್ಕೆ ಹೊಸದು. ಅದರಲ್ಲೂ ಮರದ ಇದ್ದಿಲಿಂದ ಕಬ್ಬಿಣ ತಯಾರಿಸುವುದು ಪ್ರಪಂಚದಲ್ಲೇ ಅತಿ ವಿರಳ. ಅದರ ಸಂಖ್ಯೆ ಕೈ ಬೆರಳಲ್ಲೇ ಎಣಿಸಬಹುದು. ಏಷ್ಯಾ ಖಂಡಕ್ಕೇ ಈ ಉದ್ಯಮ ಹೊಸತು. ಈ ನೂತನ ಉದ್ಯಮ ಯಶಸ್ವಿಯಾಗಬಲ್ಲುದೇ ಎಂದು ಶಂಕಿಸುತ್ತಿದ್ದರೆ, 'ಯಶಸ್ವಿಯಾದರೂ, ಲಾಭದಾಯಕವಾಗದು' ಎಂಬ ಈ ಶಕುನದ ನುಡಿ—ಅನುಭವಶಾಲಿಗಳಿಂದ.

ಇಂಥ ಸಂದಿಗ್ಧ ಸಂಕಟ ಸನ್ನಿವೇಶದಲ್ಲಿ ಶ್ರೀಮನ್ಮಹಾರಾಜರವರು ನಿವೃತ್ತರಾಗಿ ಬೊಂಬಾಯಿಯಲ್ಲಿದ್ದ ವಿಶ್ವೇಶ್ವರಯ್ಯನವರನ್ನು ದಿವಾನ್ ಬ್ಯಾನರ್ಜಿ ಅವರ ಮುಖೇನ ಕರೆಕಳಿಸಿದರು. ಯಾರಿಗೆ ತಾನೆ ಇವರನ್ನು ಬಿಟ್ಟು ಕೆಲಸ ವಹಿಸಿಕೊಳ್ಳಲು ಧೈರ್ಯ? ತನ್ನ ಯೋಜನೆಯನ್ನೂ ತಾನು ಕೈಗೊಂಡ ಕೆಲಸವನ್ನೂ ಯಶಸ್ವಿಯಾಗಿ ಮಾಡಬೇಕೆಂಬ ಸಂಕಲ್ಪ, ದೇಶಭಕ್ತಿಗಳಿಂದ ಪ್ರೇರಿತವಾಗಿ ವಿಶ್ವೇಶ್ವರಯ್ಯನವರು 'ಆಗಲಿ' ಎಂದರು. ಹಣಕಾಸಿನ ವಿಷಯದಲ್ಲಿ ಮೇಲ್ವಿಚಾರಣೆ ವಿನಾ ತನಗೆ ಸಂಪೂರ್ಣ ಸ್ವಾತಂತ್ರ್ಯವಿರಬೇಕೆಂದು ಕರಾರು ಮಾಡಿಕೊಂಡರು. ಇವರ ಸಹಾಯಕ್ಕಾಗಿ ಕಾರ್ಯಕಾರಿ ಮಂಡಲಿಯೊಂದು ಸ್ಥಾಪಿತವಾಯಿತು. ಅದಕ್ಕೆ ಇವರೇ ಅಧ್ಯಕ್ಷರು. ಆರೂವರೆ ವರುಷಗಳ ಕಾಲ ಅಧ್ಯಕ್ಷರಾಗಿದ್ದು ಬಂದ ಅಪಾರ ಎಡರು ತೊಡರುಗಳನ್ನೆಲ್ಲಾ ಧೈರ್ಯದಿಂದ ಎದುರಿಸಿ, ಭದ್ರಾವತಿಗೆ ಭದ್ರವಾದ

ಅಡಿಪಾಯ ಹಾಕಿ, ಸುಸೂತ್ರವಾಗಿ ಕೆಲಸ ನಡೆದುಕೊಂಡು ಬರುವಂತೆ ಯೋಗ್ಯ ವ್ಯವಸ್ಥೆ ಮಾಡಿ ತದನಂತರ ನಿವೃತ್ತರಾದರು. ಈ ಅವಧಿಯಲ್ಲಿ ಅವರು ಮಾಡಿ ತೋರಿಸಿದ ಸಾಹಸ ಪವಾಡವಾಗಿ ನಿಂತಿದೆ.

ವಿಶ್ವೇಶ್ವರಯ್ಯನವರು ಎಲ್ಲ ಕೆಲಸಗಳಲ್ಲಿಯೂ ಸಾರ್ವಜನಿಕ ಬೆಂಬಲ ವನ್ನು ಅಪೇಕ್ಷಿಸುತ್ತಿದ್ದರು. ಸಮಿತಿಗಳನ್ನು ರಚಿಸಿ ಅವುಗಳ ಮೂಲಕ ಕೆಲಸ ಮಾಡುವುದು ಅವರಿಗೆ ಪ್ರಿಯವಾದ ಪದ್ಧತಿ. ಇದರಿಂದ ಸಾರ್ವಜನಿಕರಿಗೂ ತಮ್ಮ ಜವಾಬ್ದಾರಿಯು ಅರಿವಾಗುತ್ತದೆ. ಹತ್ತು ಜನಕ್ಕೆ ದೇಶಾಭ್ಯುದಯದ ಕೆಲಸಗಳಲ್ಲಿ ಅನುಭವ ದೊರೆಯುತ್ತದೆ. ಪ್ರತಿಯೊಂದು ಉದ್ಯಮದಲ್ಲಿಯು ಇರುವ ತೊಂದರೆಗಳು ಕಷ್ಟ ಸಂಕಟಗಳು ಸ್ವಾನುಭವದಿಂದ ಅರಿವಾಗುತ್ತವೆ. ಭದ್ರಾವತಿ ಕಾರ್ಖಾನೆಯ ಆಡಳಿತದ ನಿರ್ವಹಣಕ್ಕಾಗಿ ಒಂದು ಸಮಿತಿ ಹೀಗೆ ಸ್ಥಾಪಿತವಾಯಿತು.

ಕಾರ್ಖಾನೆ ಕೆಲಸ ಈಗ ಪ್ರಾರಂಭಿಸುವುದು ಸೂಕ್ತವಲ್ಲ ಎಂಬ ವಿರುದ್ಧ ಸಲಹೆಯನ್ನು ಪ್ರತಿಭಟಿಸಿ ಕೆಲಸವನ್ನು ಮೊದಲು ಮಾಡಿದ್ದಾಯಿತು. ಆದರೆ ದೈವ ಪರೀಕ್ಷೆ ಎಂಬಂತೆ ಭದ್ರಾ ಹೊಳೆಯಲ್ಲಿ ಎಂದೂ ಇಲ್ಲದ ಪ್ರವಾಹ ಬಂದು ಅದಿರು ಕರಗಿಸುವ ದೊಡ್ಡ ಕುಲುಮೆ, ಪಂಪಿಂಗ್ ಸ್ಟೇಷನ್ ಮೊದಲಾದ ಭಾಗಗಳಿಗೆ ನೀರು ನುಗ್ಗಿ ಯಂತ್ರಾಲಯದ ಕೆಲಸವನ್ನು ನಿಲ್ಲಿಸಬೇಕಾಯಿತು. ಮತ್ತೆ ಕೆಲಸ ಪ್ರಾರಂಭಿಸಲು ಆರು ತಿಂಗಳಾದರೂ ಬೇಕು ಎಂದು ಆಗಿದ್ದ ಜನರಲ್ ಮ್ಯಾನೇಜರ್ ಹೇಳಿದರು. ಕಾರ್ಖಾನೆಯ ಕಟ್ಟೋಣವೇ ಸರಿಯಾಗಿಲ್ಲವೆಂದು ಅವರ ಅಭಿಪ್ರಾಯ. 'ಬೇಡ ಬೇಡ ವೆಂದರೂ ಕೆಲಸ ಪ್ರಾರಂಭಮಾಡಿ ಸರಕಾರದ ಹಣ ಪೋಲುಮಾಡಲು ವಿಶ್ವೇಶ್ವರಯ್ಯನವರಿಗೆ ಅವಕಾಶ ಕೊಡಲಾಗದು. ಈ ಬಿಳೀ ಆನೆಯನ್ನು ಸಾಕಿಕೊಂಡಿದ್ದರೆ ಸರಕಾರದ ಬೊಕ್ಕಸವೇ ಬರಿದಾದೀತು. ಶಾಶ್ವತವಾಗಿ ಕೆಲಸ ನಿಲ್ಲಿಸಿಬಿಡಿ' ಎಂದು ಮೈಸೂರಿನ ಪ್ರಜಾಪ್ರತಿನಿಧಿ ಸಭೆಯಲ್ಲೂ ಪತ್ರಿಕೆಗಳಲ್ಲೂ ಹಲವರು ಕಟುವಾಗಿ ಟೀಕಿಸಿದರು. ವಿಶ್ವೇಶ್ವರಯ್ಯನವರ ಧೃತಿ ಕೆಡಲಿಲ್ಲ. ಕೆಲಸ ಮುಂಬರಿಸಲು ಸಾಧ್ಯವಿಲ್ಲ ಎಂದು ಹೇಳುತ್ತಿದ್ದ ಜನರಲ್ ಮ್ಯಾನೇಜರನ್ನು ಕೆಲಸದಿಂದ ತೆಗೆದು ಮತ್ತೊಬ್ಬರನ್ನು ಆ ಸ್ಥಾನಕ್ಕೆ

ನೇಮಿಸಿದರು. ಆರು ವಾರದಲ್ಲಿ ಕೆಲಸ ಮುಗಿಸಿ ಮತ್ತೆ ಕುಲಿಮೆ ಕೆಲಸ ಮೊದಲು ಮಾಡಲು ಸಾಧ್ಯ, ಹಾಗೆ ಮಾಡಲೇಬೇಕೆಂದು ವಿಶ್ವೇಶ್ವರಯ್ಯನವರು ಸೂಚಿಸಿದರು. ಇದು ತಮ್ಮ ಸತ್ವ ಪರೀಕ್ಷೆ ಎಂದು ಪ್ರತಿಯೊಬ್ಬರೂ ಭಾವಿಸಿ ಹಗಲಿರುಳೆನ್ನದೆ ಶ್ರಮಿಸಿ ಆರು ವಾರಗಳಲ್ಲಿಯೆ ಮತ್ತೆ ಕಾರ್ಖಾನೆ ಕೆಲಸ ಪ್ರಾರಂಭಿಸುವಂತೆ ಮಾಡಿದರು ಭಾರತೀಯರ ಸಾಮರ್ಥ್ಯದಲ್ಲಿ, ಸಾರ್ವಜನಿಕ ಸಮಿತಿಗಳಲ್ಲಿ ವಿಶ್ವೇಶ್ವರಯ್ಯನವರ ವಿಶ್ವಾಸ ಸಫಲವಾಯಿತು.

ಭದ್ರಾವತಿ ಕಾರ್ಖಾನೆಗೆ ಕಬ್ಬಿಣದ ಅದಿರು ವರ್ತುಲಾಕಾರವಾಗಿ ಚಲಿಸುವ ಉಕ್ಕಿನ ಹಗ್ಗದ ಮೇಲೆ ತೂಗಾಡುವ ತೊಟ್ಟಿಲಲ್ಲಿ ಬರುತ್ತದೆ. ದಟ್ಟವಾದ ಕಾಡುಗಳಮೇಲ್ಭಾಗದಲ್ಲಿ ಹಾದು ಬರುವ ಸುಮಾರು ಮೂರು ಮೈಲಿಗಳ ಉದ್ದವಾದ, ಈ 'ರೋಪ್-ವೇ' ನೋಡಲು ಒಂದು ರೋಮಾಂಚಕ ದೃಶ್ಯ. ಹೀಗೆ ಬಂದ ಅದಿರನ್ನು ಕರಗಿಸಲು ಮರದ ಇದ್ದಲನ್ನು ಬಳಸುತ್ತಾರೆ. ದೂರದ ಕಾಡುಗಳಿಂದ ಟ್ರಾಂವೆ ಗಾಡಿಗಳು ಮರಗಳನ್ನು ಕಾರ್ಖಾನೆಗೆ ಹೊತ್ತು ತರುತ್ತವೆ ಮರವನ್ನು ವೈಜ್ಞಾನಿಕ ರೀತಿಯಲ್ಲಿ ಇದ್ದಿಲಾಗಿ ಮಾಡುವುದಕ್ಕೇ ಪ್ರತ್ಯೇಕ ವ್ಯವಸ್ಥೆ, ಪ್ರತ್ಯೇಕ ಶಾಖೆ. ಹೀಗೆ ಇದ್ದಿಲಾಗಿ ಪರಿವರ್ತಿಸುವುದರಲ್ಲಿ ಮರದೆಣ್ಣೆ ಮೊದಲಾದ ಹಲವು ದ್ರವಗಳು ದೊರೆಯುತ್ತವೆ. ಅವುಗಳೆಲ್ಲವನ್ನೂ ಶೇಖರಿಸಿ, ಶೋಧಿಸಿ ಮಾರಾಟ ಮಾಡುತ್ತಾರೆ. ಕಾಲಕಾಲಕ್ಕೆ ಸೌದೆ ಬಾರದೆ ಹೋದರೆ ಕೆಲಸ ನಿಂತು ಹೋಗುತ್ತದೆ ಒಮ್ಮೆ ಇಂಥ ಘಟನೆಯೂ ಸಂಭವಿಸಿತು. ಸಾಕಾದಷ್ಟು ಸೌದೆಯ ದಾಸ್ತಾನಿಲ್ಲದೆ ಕೆಲಸನಿಲ್ಲಿಸುವ ಸಂದರ್ಭ ತಲೆದೋರಿತು ಅಂಥ ಸನ್ನಿವೇಶದಲ್ಲಿ ಕೆಲಸಗಾರರೆಲ್ಲ ಸಹಕರಿಸಿ ರಾತ್ರಿ ಹಗಲು ಬಿಡುವಿಲ್ಲದೆ ದುಡಿದು ಟ್ರಾಂಗಳಲ್ಲಿ ಸೌದೆ ತುಂಬಿ ಸಕಾಲಕ್ಕೆ ಒದಗಿಸಿ ಕಾರ್ಖಾನೆಯ ಕೆಲಸ ಮುಂಬರಿಯುವಂತೆ ಮಾಡಿದರು ಮರದ ಇದ್ದಿಲಿನಿಂದ ಕಬ್ಬಿಣ ಕರಗಿಸುವ ಇಡೀ ಏಷ್ಯದಲ್ಲೆ ಮೊಟ್ಟ ಮೊದಲನೆ ಈ ಕಾರ್ಖಾನೆಯ ಕೆಲಸ ಮರವಿಲ್ಲದೆ ನಿಂತು ಹೋಯಿತು ಎಂಬ ಅಪಾದನೆಗೆ ಗುರಿಯಾಗಬಾರದೆಂಬ ದೇಶ ಪ್ರೇಮ, ಪ್ರತಿಷ್ಠೆ, ಆತ್ಮ ವಿಶ್ವಾಸ, ಈ ಕೆಲಸಗಾರರಿಗೆ ಹಗಲಿರುಳು ದುಡಿಯಲು ಪ್ರೇರಕವಾಯಿತು.

ಹೀಗೆ ನಮ್ಮ ಜನ ಕಾರ್ಖಾನೆಯನ್ನು ಯಶಸ್ವಿಯಾಗಿ ಮಾಡಲು ತ್ಯಾಗದ ಮನೋಭಾವನೆಯಿಂದ ದುಡಿಯುತ್ತಿದ್ದರೆ ನಮ್ಮ ಸರಕಾರದ ಉದ್ಯೋಗದಲ್ಲಿಯೇ ಇದ್ದು ಕೈಗಾರಿಕೆ ಇಲಾಖೆಯ ಮುಖ್ಯಾಧಿಕಾರಿಯಾಗಿ ನಿವೃತ್ತರಾಗಿ ಇಂಗ್ಲೆಂಡಿನಲ್ಲಿದ್ದ ಸರ್ ಚಾಟರ್ಟನ್ ಅವರು, ಈ ದುರದೃಷ್ಟದ ಕೈಗಾರಿಕೆಯನ್ನು ಮುಚ್ಚದೆ ವಿಧಿಯಿಲ್ಲ ಎಂದು ಲಂಡನ್ನಲ್ಲಿ ಒಂದು ಭಾಷಣ ಮಾಡಿ ವ್ಯಕ್ತಪಡಿಸಿದರು. ಬಿಳೀ ಆನೆ ಕಟ್ಟಿಕೊಂಡು ಸಾಕಲು ಸಾಧ್ಯವೆ? ದೇಶದ ಬೊಕ್ಕಸ ಬರಿದಾಗಿ ಹೋಗುತ್ತಿದೆ ಎಂದು ಬೊಬ್ಬೆ ಒಂದೆಡೆ. ಕಾರ್ಖಾನೆಯನ್ನು ನಡೆಸಲು ಸಾಧ್ಯವೇ ಇಲ್ಲ ಎಂದು ವಿದೇಶೀಯ ತಜ್ಞರ ಅಭಿಮತ. ಕೆಲಸ ನಡೆದರೂ ಲಾಭದಾಯಕವಾಗದು ಎಂಬ ಕೂಗು ಬೇರೆ. ಪ್ರವಾಹದ ಹಾವಳಿ, ಮಲೇರಿಯ ಜ್ವರದ ಬಾಧೆ, ಕೆಲಸಗಾರರು ಬರುವುದಕ್ಕೆ ಹಿಮ್ಮೆಟ್ಟುತ್ತಿದ್ದ ವಾತಾವರಣ. ಆದರೆ—

ಪ್ರಾರಭ್ಯತೇ ನ ಖಲು ವಿಘ್ನಭಯೇನ ಮೂರ್ಖೈಃ
ಪ್ರಾರಭ್ಯ ವಿಘ್ನವಿಹತಾಃ ವಿರಮಂತಿ ಮಧ್ಯಾಃ।
ವಿಘ್ನೈಃ ಪುನಃ ಪುನರಪಿ ಪ್ರತಿಹನ್ಯಮಾನಾಃ
ಪ್ರಾರಬ್ಧ ಮುತ್ತಮಗುಣಾಃ ನಪರಿ ತ್ಯಜಂತಿ ||

ಎಂಬಂತೆ ಆತ್ಮವಿಶ್ವಾಸ, ದೃಢಚಿತ್ತ, ದೇಶಾಭಿಮಾನಗಳಿಂದ ಪ್ರೇರಿತರಾಗಿ ಒಮ್ಮೆ ಪ್ರಾರಂಭಿಸಿದ ಕೆಲಸವನ್ನು ಎಷ್ಟೇ ವಿಘ್ನಗಳು ಬಂದರೂ ಲೆಕ್ಕಿಸದೆ ಕೆಲಸ ಮುಂಬರಿಸಿಕೊಂಡೇ ಬಂದರು.

ಭದ್ರಾವತಿಯಲ್ಲಿ ಕನಿಷ್ಠ ಪಕ್ಷ ಅಮೆರಿಕದ ಹನ್ನೊಂದು ಜನ ನಿಪುಣರಾದರೂ ಇರಬೇಕೆಂದು ಮ್ಯಾನೇಜಿಂಗ್ ಏಜಂಟರು ಗೊತ್ತು ಮಾಡಿದ್ದರು. ಇವರಿಗೆ ಬಹಳ ಹೆಚ್ಚಿನ ಸಂಬಳ. ನಮ್ಮ ದೇಶದವರಿಗೆ ಇಂಥಾ ದೊಡ್ಡ ಉದ್ಯಮ ನಡೆಸಿಕೊಂಡು ಬರುವ ಸಾಮರ್ಥ್ಯ ಅನುಭವ ಸಾಲದೆಂಬ ಕೀಳು ನೋಟ ಬೇರೆ. ವಿಶ್ವೇಶ್ವರಯ್ಯನವರಿಗೆ ಭಾರತೀಯರು ವಿದ್ಯಾಬುದ್ಧಿ ಸಾಮರ್ಥ್ಯಗಳಲ್ಲಿ ಯಾರಿಗೂ ಕಡಮೆಯಿಲ್ಲ ಎಂಬ ದೇಶಭಕ್ತಿ, ಸ್ವಾಭಿಮಾನವಿತ್ತು. ಈ ಅಭಿಪ್ರಾಯದ ಪರೀಕ್ಷಾ ಕಾಲ ಈಗ ಬಂತು. ಅಧಿಕಾರ ಸೂತ್ರ ವಹಿಸಿಕೊಂಡ ಸ್ವಲ್ಪ ದಿನಗಳಿಂದಲೇ ಒಬ್ಬೊಬ್ಬರನ್ನಾಗಿ ಪರದೇಶೀ

ಯರನ್ನು ಅವರವರ ದೇಶಕ್ಕೆ ಕಳುಹಿಸತೊಡಗಿದರು. ಒಬ್ಬಿಬ್ಬರ ವಿನಾ ಹಲವು ತಿಂಗಳುಗಳಲ್ಲೇ ಕಾರ್ಖಾನೆಯಲ್ಲಿ ವಿದೇಶಿಗಳ ಸುಳಿವಿಲ್ಲದಂತೆ ಮಾಡಿ ಆ ಗುರುತರ ಜವಾಬ್ದಾರಿ ಸ್ಥಾನಗಳಿಗೆ ನಮ್ಮ ಇಂಜಿನಿಯರುಗಳು ನಮ್ಮ ವಿಜ್ಞಾನಿಗಳನ್ನೇ ನೇಮಿಸಿದರು. ಪರದೇಶಿಗಳಿಗಿಂತ ತಾವು ಯಾವ ವಿಷಯ ದಲ್ಲೂ ಕಡಮೆಯಿಲ್ಲ ಎಂದು ನಮ್ಮವರು ಮಾಡಿ ತೋರಿಸಿದರು ಸ್ವಲ್ಪ ಕಾಲ ದಲ್ಲಿಯೇ ಎಲ್ಲ ವಿದೇಶೀಯ ನಿಪುಣರಿಗೂ ಅಪ್ಪಣೆ ಚೀಟಿ ದೊರೆಯಿತು. ಹಣವೂ ಉಳಿಯಿತು, ಸ್ವಾಭಿಮಾನವೂ ಬೇರೂರಿತು.

ಭಾರತಕ್ಕೆ ೧೯೨೭ ರಲ್ಲಿ ಭದ್ರಾವತಿ ಕಾರ್ಖಾನೆಯ ಸ್ಥಾಪನೆಯಲ್ಲಿ ಪ್ರಧಾನ ಪಾತ್ರ ವಹಿಸಿದ ಅಮೆರಿಕದ ಸಿ. ಪಿ. ಪೆರ್ರಿ ಅವರು ಬಂದು ಭದ್ರಾವತಿಗೂ ಭೇಟಿಯಿತ್ತರು. ಭದ್ರಾವತಿಯನ್ನು ಲಾಭದಾಯಕವಾಗಿ ನಡೆಸಿಕೊಂಡು ಬರುವುದು ಸಾಧ್ಯವಲ್ಲ ಎಂದು ಇವರ ಸಂಸ್ಥೆಯ ಮಾರ್ಷಾಲ್ ಅವರ ಅಭಿಪ್ರಾಯ. ಸಂಪೂರ್ಣ ಭಾರತೀಕರಣವಾಗಿ ಭಾರತೀಯ ರಿಂದಲೇ ಯಶಸ್ವಿಯಾಗಿ ನಡೆದು ಬರುತ್ತಿದ್ದ ಈ ಉದ್ಯಮವನ್ನು ಕಂಡು ತಮ್ಮ ಆಶ್ಚರ್ಯವನ್ನೂ ಸಂತೋಷವನ್ನೂ ಆಗ ಯೂರೋಪಿನಲ್ಲಿ ಪ್ರವಾಸ ಕೈಗೊಂಡಿದ್ದ ವಿಶ್ವೇಶ್ವರಯ್ಯನವರಿಗೆ ತಂತಿಯ ಮೂಲಕ ಪೆರ್ರಿ ತಿಳಿಸಿದರು ತಾವೇ ಮಹಾರಾಜರನ್ನು ಭೇಟಿ ಮಾಡಿ ತಮ್ಮ ಮೆಚ್ಚುಗೆಯನ್ನು ವ್ಯಕ್ತ ಪಡಿಸಿದರು. ವಿಶ್ವೇಶ್ವರಯ್ಯನವರು ಆರೂವರೆ ವರ್ಷಗಳ ಕಾಲ ಸಂಚಾಲಕ ಮಂಡಲಿಯ ಅಧ್ಯಕ್ಷರಾಗಿ ಅಪಾರ ಸೇವೆಸಲ್ಲಿಸಿ ೧೯೨೯ ರಲ್ಲಿ ತಮ್ಮ ಸ್ಥಾನ ದಿಂದ ನಿವೃತ್ತಿಪಡೆದರು. ಇವರ ಪ್ರಯತ್ನದಿಂದ ಕಾರ್ಖಾನೆಯ ಎಲ್ಲ ಶಾಖೆ ಗಳೂ ಒಂದಕ್ಕೊಂದು ಹೊಂದಿಕೊಂಡು ವ್ಯವಸ್ಥಿತ ರೂಪದಲ್ಲಿ ಕೆಲಸ ಮಾಡಲು ಸಾಧ್ಯವಾಯಿತು. ಕಾರ್ಖಾನೆಗೆ ದಿನ ಬಳಕೆಗೆ ಬೇಕಾದ ಅದಿರು, ಸೌದೆ, ಇದ್ದಿಲು, ಸುಣ್ಣಕಲ್ಲು ಮೊದಲಾದ ಕಚ್ಚಾ ಪದಾರ್ಥಗಳನ್ನು ಸಾಕಷ್ಟು ಪ್ರಮಾಣದಲ್ಲಿ ಸುಲಭ ದರದಲ್ಲಿ ಒಯ್ಯುವುದಕ್ಕೂ, ಮೊದಲು ಅಂದಾಜು ಮಾಡಿದ್ದ ಪ್ರಮಾಣದಲ್ಲಿ ಕಬ್ಬಿಣವನ್ನು ತಯಾರಿಸುವುದಕ್ಕೂ ಸಾಧ್ಯವಾಯಿತು. ವೆಚ್ಚವೂ ಶೇಕಡ ೫೦ ರಷ್ಟು ಕಡಮೆಯಾಯಿತು. ಆಧುನಿಕ ವಿಧಾನಗಳಿಂದ ಕೆಲಸ ನಿರ್ವಹಿಸುವುದರಲ್ಲಿ ಭಾರತೀಯರು ವಿಶೇಷ ಅನುಭವಗಳಿಸುವುದಕ್ಕೆ ಅವಕಾಶವೂ ಆಯಿತು.

ಇಷ್ಟೇ ಅಲ್ಲ. ಭದ್ರಾವತಿಯಲ್ಲಿ ತಯಾರಾಗುತ್ತಿದ್ದ ಕಬ್ಬಿಣವನ್ನು ಅಮೆರಿಕಾದೇಶಕ್ಕೆ ಒಯ್ದು, ಅಲ್ಲಿ ಮರದ ಇದ್ದಲಿನಿಂದ ತಯಾರಾಗುತ್ತಿದ್ದ ಕಬ್ಬಿಣಕ್ಕಿಂತಲೂ ಅಗ್ಗದ ದರದಲ್ಲಿ ಇದನ್ನು ಮಾರುವುದು ಸಾಧ್ಯವಾಯಿತು. 'ಲಂಡನ್ ಟೈಂಸ್'ನಲ್ಲಿ ಮತ್ತು ಅಮೆರಿಕದ ಪತ್ರಿಕೆಗಳಲ್ಲಿ ಬಂದ ಭದ್ರಾವತಿಯ ಕಬ್ಬಿಣದ ಪ್ರಕಟನೆ ಅಲ್ಲಿನ ಜನರನ್ನು ವಿಸ್ಮಯಗೊಳಿಸಿತು. ಸಮುದ್ರಕ್ಕೆ ಉಪ್ಪು ಒಯ್ದಂತೆ ಇಂಗ್ಲೆಂಡ್ ಮತ್ತು ಅಮೆರಿಕಾಗಳಿಗೆ ಭಾರತದಿಂದ ಕಬ್ಬಿಣದ ರಫ್ತು! ೧೯೩೭ರಲ್ಲಿ ವಿಶ್ವೇಶ್ವರಯ್ಯನವರು ಅಮೆರಿಕಾಗೆ ಹೋಗಿ ಭದ್ರಾವತಿಯ ಕಬ್ಬಿಣಕ್ಕೆ ಗಿರಾಕಿ ಗಳಿಸಿಕೊಂಡು ಬಂದರು. ಭಾರತದಿಂದ ೫೦೦೦ ಟನ್‌ಗಳಷ್ಟು ಕಬ್ಬಿಣ ಮಾತ್ರ ಆಮದು ಮಾಡಲು ಅಮೆರಿಕ ಸರ್ಕಾರ ಅನುಮತಿ ಕೊಟ್ಟಿತು. ಇದಕ್ಕೂ ಹೆಚ್ಚಾಗಿ ಆಮದು ಮಾಡಲು ಅವಕಾಶ ಕೊಟ್ಟರೆ ಅಮೆರಿಕದ ಕಬ್ಬಿಣ ತಯಾರಿಕೆಯ ಉದ್ಯಮಕ್ಕೇ ಎಲ್ಲಿ ಅಪಾಯವಾದೀತೋ ಎಂಬ ಭಯ. ಗೊತ್ತಾದ ಪ್ರಮಾಣಕ್ಕಿಂತ ಒಂದು ಔನ್ಸು ಹೆಚ್ಚು ರಫ್ತು ಮಾಡಿದರೂ ಅನುಮತಿಯನ್ನೇ ರದ್ದು ಮಾಡಿಬಿಡುವುದಾಗಿ ಬೆದರಿಕೆ ಬೇರೆ ಹಾಕುತ್ತಿದ್ದರು. ಈ ಪ್ರವಾಸದಲ್ಲಿ ಮರವನ್ನು ಇದ್ದಿಲಾಗಿ ಪರಿವರ್ತಿಸುವಾಗ ಉತ್ಪತ್ತಿಯಾಗುವ ಮರದೆಣ್ಣೆಯೇ ಮೊದಲಾದ ಉಪ-ಉತ್ಪತ್ತಿಗಳ ಸಂಗ್ರಹದ ಕ್ರಮಗಳನ್ನು ಕೂಲಂಕಷವಾಗಿ ನೋಡಿಬಂದರು. ಅಮೆರಿಕ ಮತ್ತು ಸ್ವೀಡನ್‌ಗಳಲ್ಲಿ ಮರ ಇದ್ದಲಿನ ಶಾಖದಿಂದ ಕಬ್ಬಿಣ ತಯಾರಿಸುವ ಹಲವು ಕಾರ್ಖಾನೆಗಳಿವೆ. ಅವುಗಳನ್ನೂ ನೋಡಿಕೊಂಡು ಬಂದು ಆಧುನಿಕ ವಿಧಾನಗಳನ್ನು ಭದ್ರಾವತಿಯಲ್ಲಿಯೂ ಜಾರಿಗೆ ತಂದರು. ಬರ್ಲಿನ್ ನಗರದಲ್ಲಿ ಸುತ್ತಮುತ್ತಲಿನ ಮರದಿಂದ ವಿಜ್ಞಾನ ರೀತ್ಯಾ ಇದ್ದಿಲು ಮಾಡುವ ಸುಮಾರು ೮೦ ಕಾರ್ಖಾನೆಗಳ ಮೇಲ್ವಿಚಾರಣೆಯನ್ನು ಒಂದೇ ಸಂಸ್ಥೆಯ ಹಲವು ಇಂಜಿನಿಯರುಗಳು ನಡೆಸುತ್ತಿದ್ದುದು ಇವರನ್ನು ವಿಸ್ಮಯಗೊಳಿಸಿತು.

ಮೂಲ ಕೈಗಾರಿಕೆಗಳಿಗೆ ಅತ್ಯಗತ್ಯವಾದ ಕಬ್ಬಿಣ ಉಕ್ಕುಗಳ ತಯಾರಿಕೆಯನ್ನು ಕೇವಲ ಲಾಭದೃಷ್ಟಿಯಿಂದ ನೋಡಬಾರದು. ರಾಷ್ಟ್ರದ ಬೆಳವಣಿಗೆಗೆ ಅತ್ಯಗತ್ಯವಾದ ಈ ಉದ್ಯಮಗಳನ್ನು ರಾಷ್ಟ್ರಾಭ್ಯುದಯದ ದೃಷ್ಟಿಯಿಂದ ಪರೀಕ್ಷಿಸಬೇಕು. ದ್ವಿತೀಯ ಲೋಕ ಸಂಗ್ರಾಮದ ಅವಧಿ

ಯಲ್ಲಿ ಭದ್ರಾವತಿಯ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಯಿಂದ ಭಾರತವು ಅಪಾರ ಪ್ರಯೋಜನ ಪಡೆಯಿತು. ಅಲ್ಲದೆ ವ್ಯಾಪಾರ ಮತ್ತು ಲಾಭದ ದೃಷ್ಟಿಯಿಂದಲೂ ಭದ್ರಾವತಿ ಯಶಸ್ವಿಯಾಗಿ ಕೆಲಸ ನಡೆಸುತ್ತಿದೆ ಈ ಕಾರ್ಖಾನೆಯ ಮೂಲ ಬಂಡವಾಳ ಸುಮಾರು ೫ ಕೋಟಿ ರೂಪಾಯಿ. ಇನ್ನು ಸ್ವಲ್ಪ ವರುಷಗಳಲ್ಲಿಯೇ ಇದರ ನಿವ್ವಳ ವಾರ್ಷಿಕ ಉತ್ಪತ್ತಿ ಐದು ಕೋಟಿಯಾಗಬಹುದೆಂದು ನಿರೀಕ್ಷಿಸಲಾಗಿದೆ ೧೯೪೯ ರಲ್ಲಿ ಇದರ ವಾರ್ಷಿಕ ಆದಾಯ ೧೬೯ ಲಕ್ಷ ರೂಪಾಯಿ ಖರ್ಚು ಕಳೆದು ಬಂದ ಲಾಭ ೧೩ ಲಕ್ಷಕ್ಕೂ ಮೀರಿತ್ತು. ಬಂಡವಾಳದ ಮೇಲೆ ನೂರಕ್ಕೆ ೬ ರಂತೆ ಲಾಭ.

ಭದ್ರಾವತಿಯನ್ನು ಭದ್ರಪಡಿಸಿದ್ದಲ್ಲದೆ ಮತ್ತೊಂದು ಉಪಕಾರವನ್ನೂ ವಿಶ್ವೇಶ್ವರಯ್ಯನವರು ಮಾಡಿದರು. ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ ಆರು ವರ್ಷಗಳ ಕಾಲವೂ ಯಾವ ಪ್ರತಿಫಲವನ್ನೂ ಸಂಭಾವನೆಯನ್ನೂ ಇವರು ತೆಗೆದುಕೊಳ್ಳಲಿಲ್ಲ. ಇವರ ಮೇಲ್ಪಂಕ್ತಿಯನ್ನನುಸರಿಸಿ ಹಣದ ಅಭಾವದ ಕಾಲದಲ್ಲಿ ಅನೇಕ ಉದ್ಯೋಗಿಗಳು ತಮ್ಮ ಸಂಬಳವನ್ನು ಕಡಮೆ ಮಾಡಿ ಕೊಂಡರು. ನಿವೃತ್ತರಾದಾಗ ಭದ್ರಾವತಿಯಿಂದ ವಿಶ್ವೇಶ್ವರಯ್ಯನವರಿಗೆ ಬಡ್ಡಿ ಸೇರದೆಯೇ ೧,೩೦,೦೦೦ ರೂಪಾಯಿಗಳ ಸಂಭಾವನೆ ಸಲ್ಲಬೇಕಾಗಿತ್ತು.

'ಹಣಗಳಿಸುವ ಆಸೆಯಿರುವ ವಯಸ್ಸು ನನಗೆ ಕಳೆಯಿತು. ಹಣದಾಸೆ ನನ್ನಲ್ಲಿ ಉಡುಗಿ ಹೋಗಿದೆ' ಎನ್ನುತ್ತಾ ವೃದ್ಧಾಪ್ಯದಲ್ಲಿ ಆಸೆ ಹೆಚ್ಚು ಎಂಬ ಮಾತನ್ನು ಸುಳ್ಳುಮಾಡಿ ತೋರಿಸಿದರು. ಅಷ್ಟೇ ಅಲ್ಲ ಈ ಹಣದಿಂದ ವೃತ್ತಿ ಶಿಕ್ಷಣಾಲಯ ತೆಗೆಯಬೇಕೆಂದು ಸರ್ಕಾರಕ್ಕೆ ಎಲ್ಲಾ ಹಣವನ್ನು ಒಪ್ಪಿಸಿಕೊಟ್ಟರು. ವೃತ್ತಿ ಶಿಕ್ಷಣಾಲಯ ಯಾವರೀತಿ ಇರಬೇಕೆಂದು ಅದರ ಪರಿಪೂರ್ಣ ಯೋಜನೆಯನ್ನೂ ಸಿದ್ಧಮಾಡಿಕೊಟ್ಟರು. ವಿಶ್ವೇಶ್ವರಯ್ಯನವರ ಧನ ಮತ್ತು ಶ್ರಮದಿಂದ ಸ್ಥಾಪಿತವಾದ ಈ ಶಿಕ್ಷಣಾಲಯಕ್ಕೆ ಅವರ ಹೆಸರನ್ನೇ ಇಡಬೇಕೆಂದು ಮಹಾರಾಜರು ಆಶಿಸಿದರು. ಆದರೆ ಅದಕ್ಕೂ ಇವರು ಸಮ್ಮತಿಸದೆ- "ಈ ಹಣ ನನ್ನದಲ್ಲ, ತಮ್ಮದು. ತಮ್ಮ ಹೆಸರನ್ನೇ ದಯ ಪಾಲಿಸಬೇಕೆಂದು" ಶ್ರೀಮನ್ಮಹಾರಾಜರನ್ನು ಒತ್ತಾಯಪಡಿಸಿದರು. ಎಷ್ಟು

ಔದಾರ್ಯ, ಎಷ್ಟು ರಾಜಭಕ್ತಿ, ರಾಷ್ಟ್ರಭಕ್ತಿ! ಅದೇ ಇಂದು ಬೆಂಗಳೂರಿನಲ್ಲಿ ಜಯಚಾಮರಾಜೇಂದ್ರ ವೃತ್ತಿ ಶಿಕ್ಷಣಾಲಯ ಎಂದು ಅಲ್ಪ ಕಾಲದಲ್ಲಿಯೇ ಅಪಾರ ಖ್ಯಾತಿಗಳಿಸಿ ನೂರಾರು ತರುಣರಿಗೆ ವೃತ್ತಿಶಿಕ್ಷಣ ಕೊಡುತ್ತಿದೆ.

"ತಮ್ಮ ಅಪಾರ ಕಾರ್ಯದಕ್ಷತೆ, ಅನುಭವ, ಕಾರ್ಯ ತತ್ಪರತೆ, ಇವುಗಳನ್ನು ಭದ್ರಾವತಿಯ ಬೆಳವಣಿಗೆಗಾಗಿ ತಾವು ವಿನಿಯೋಗಿಸದೆ ಹೋಗಿದ್ದರೆ, ಅದು ಲಾಭದಾಯಕವಾಗುತ್ತಿತ್ತೇ, ಕಡೆಗೆ ಉಳಿಯುತ್ತಿತ್ತೇ ಎಂಬುದೇ ಸಂದೇಹಾಸ್ಪದ" ಎಂದು ದಿವಾನರಾದ ಮಿರ್ಜಾ ಇಸ್ಮೇಲರು ವಿಶ್ವೇಶ್ವರಯ್ಯನವರಿಗೆ ತಮ್ಮ ವಿಶ್ವಾಸದ ಕಾಣಿಕೆ ಸಲ್ಲಿಸಿದಾರೆ. ಆ ಮಾತಿನಲ್ಲಿ ಪೂರ್ಣ ಸತ್ಯವಿದೆ ಎಂಬುದರಲ್ಲಿ ಸಂದೇಹವೇನು?

## (೩) ರೈಲ್ವೆ ಮತ್ತು ರೇವು

ವ್ಯಾಪಾರಕ್ಕೆ, ಪ್ರಯಾಣ ಸೌಕರ್ಯಕ್ಕೆ, ದೇಶದ ಆರ್ಥಿಕಾಭಿವೃದ್ಧಿಗೆ ಉತ್ತಮ ರಸ್ತೆ, ರೈಲು ಮಾರ್ಗಗಳ ಆವಶ್ಯಕ ಎಂಬುದು ಎಲ್ಲರಿಗೂ ತಿಳಿದ ವಿಷಯ ಜಲ ಮಾರ್ಗ ಸೌಲಭ್ಯವಿಲ್ಲದ ನಮ್ಮ ನಾಡಿನಲ್ಲಿ ರೈಲುಗಳೇ ಸಾಗಣೆಗೆ ಮುಖ್ಯ ಆಧಾರ. ಮೈಸೂರಿನಲ್ಲಿ ಬಹುಕಾಲದವರೆಗೂ ರೈಲುದಾರಿ ವೃದ್ಧಿಯಾಗವೆ ಹೀನಸ್ಥಿತಿಯಲ್ಲೇ ಇದ್ದಿತು. ರೈಲು ಮಾರ್ಗ ಮೈಸೂರು ಸರ್ಕಾರದ ಅಧೀನದಲ್ಲಿರದೆ ಕಂಪೆನಿಗಳ ಆಡಳಿತದಲ್ಲಿದ್ದುದು ಅದಕ್ಕೆ ಒಂದು ಮುಖ್ಯಕಾರಣ. ಆದ್ದರಿಂದ ರೈಲನ್ನು ಸರ್ಕಾರದ ವಶಕ್ಕೆ ತೆಗೆದುಕೊಳ್ಳಬೇಕೆಂದು ವಿಶ್ವೇಶ್ವರಯ್ಯನವರು ಪ್ರಯತ್ನ ಮಾಡತೊಡಗಿದರು. ೧೯೧೨ ರಲ್ಲಿ ಪ್ರತ್ಯೇಕ ರೈಲ್ವೆ ಇಲಾಖೆಯಾಯಿತು. ಇಂಡಿಯಾ ಸರ್ಕಾರದವರು ಛೀಫ್ ಇಂಜಿನಿಯರ್ ಬೆಲ್ ಅವರನ್ನು ಮೈಸೂರಿಗೆ ಕಳುಹಿಸಿಕೊಟ್ಟರು. ಯಾವ ಹೊಸ ರೈಲು ಮಾರ್ಗಗಳನ್ನು ರಚಿಸಬಹುದೆಂದು ಅಂಕಿ ಅಂಶಗಳನ್ನು ಸಂಗ್ರಹಿಸಿ ಸರ್ವೆ ಮಾಡಲಾಯಿತು. ಈ ಕೆಳಕಂಡ ರೈಲು ಮಾರ್ಗವನ್ನು ರಚಿಸುವುದು ಸೂಕ್ತವೆಂದು ಇಲಾಖೆ ಸೂಚಿಸಿತು

ಮೈಸೂರು—ಅರಸೀಕೆರೆ; ಮೈಸೂರಿಂದ (ಮದರಾಸ್ ಪ್ರಾಂತದ) ಈರೋಡಿಗೆ; ಹಾಸನ—ಮಂಗಳೂರು; ಮೈಸೂರಿಂದ ಕೊಡಗಿನಲ್ಲಿರುವ

ವೀರರಾಜಪೇಟೆ; ಚಿಕ್ಕಮಗಳೂರು- ಹಾಸನ; ತರಿಕೆರೆ--ಎಡೆಹಳ್ಳಿ (ಈಗಿನ ನರಸಿಂಹರಾಜಪುರ) (ಸ್ಟೀಂ ಟ್ರಾಂವೆ.) ಬೆಂಗಳೂರು—ಚಿಕ್ಕಬಳ್ಳಾಪುರ; ಕೋಲಾರ--ಚಿಕ್ಕಬಳ್ಳಾಪುರ; ಬೆಂಗಳೂರಿನಿಂದ ಸೇಲಂ ಜಿಲ್ಲೆಯ ಹೊಸೂರು; ನರಸಿಂಹರಾಜಪುರದಿಂದ—ಶೃಂಗೇರಿ; ಚಿಕ್ಕಜಾಜೂರಿನಿಂದ—ಚಿತ್ರದುರ್ಗ; ಶಿವಮೊಗ್ಗೆಯಿಂದ ಸಮುದ್ರತೀರದ ಭಟ್ಕಳಕ್ಕೆ; ಕಡೂರು--ಚಿಕ್ಕಮಗಳೂರು; ಮೈಸೂರು--ಕಾಕನಕೋಟೆ; ತಡಸ--ಹೆಬ್ಬೆ.

ರೈಲು ಹಾಕಲು ಇಂಡಿಯಾ ಸರ್ಕಾರ ಅನುಮತಿಯೂ ಅವಶ್ಯವಾಗಿತ್ತು. ಇಂಡಿಯಾ ಸರ್ಕಾರ ಬ್ರಿಟಿಷ್ ಕಂಪನಿಗಳ ಅಧೀನದಲ್ಲಿದ್ದ ರೈಲುಗಳಿಗೆ ಪಕ್ಷಪಾತ ತೋರುತ್ತಿದ್ದಿತು ಎಂದರೆ ತಪ್ಪಾಗದು. ಮೈಸೂರು ಅರಸೀಕೆರೆ; ಬೆಂಗಳೂರು--ಚಿಕ್ಕಬಳ್ಳಾಪುರ--ಕೋಲಾರ (ಸಣ್ಣ ರೈಲು) ಚಿತ್ರದುರ್ಗ--ಚಿಕ್ಕಜಾಜೂರು ಈ ಮೂರು ಮಾರ್ಗಗಳಿಗೆ ಮಾತ್ರ ಅನುಮತಿ ದೊರೆಯಿತು. ಬೆಂಗಳೂರು--ಚಿಕ್ಕಬಳ್ಳಾಪುರ--ಕೋಲಾರ ಮತ್ತು ಚಿತ್ರದುರ್ಗ--ಚಿಕ್ಕಜಾಜೂರು ರೈಲುಗಳು ಇವರ ಕಾಲದಲ್ಲಿಯೇ ಪ್ರಾರಂಭವಾಗಿ ಮುಗಿದುವು. ಮೈಸೂರು--ಅರಸೀಕೆರೆ ಮಾರ್ಗ ನವಂಬರ್ ೧೯೧೩ ರಲ್ಲಿ ಪ್ರಾರಂಭವಾಯಿತು. ಅನೇಕ ದೊಡ್ಡ ಸೇತುವೆಗಳನ್ನು ಕಟ್ಟಿ, ಕಲ್ಲು ಬಂಡೆಗಳನ್ನು ಒಡೆದು, ಆಳವಾದ ಮಾರ್ಗ ತೋಡಿ ಈ ರಸ್ತೆಯನ್ನು ವಿಶೇಷ ವೆಚ್ಚ, ಶ್ರಮಗಳಿಂದ ನಿರ್ಮಿಸಲಾಯಿತು ಇಂಜಿನಿಯರುಗಳು ಅಸಾಧಾರಣ ಸಾಮರ್ಥ್ಯ ತೋರಬೇಕಾಯಿತು. ನಂಜನಗೂಡಿನಲ್ಲಿ ನಿಂತು ಹೋಗುವ ರೈಲ್ವೆ ಮಾರ್ಗವನ್ನು ಈರೋಡಿಗೆ ಸೇರಿಸಲು ವಿಶ್ವೇಶ್ವರಯ್ಯನವರು ಎಷ್ಟೇ ಪ್ರಯತ್ನ ಪಟ್ಟರೂ ಇಂಡಿಯಾ ಸರ್ಕಾರದಿಂದ ಅನುಮತಿ ದೊರೆಯಲಿಲ್ಲ. ಈ ರಸ್ತೆಯ ನಿರ್ಮಾಣದಿಂದ, ಪೂನದಿಂದ--ಕನ್ಯಾಕುಮಾರಿಯವರೆಗೂ ಒಂದೇ ಗಾಡಿಯಲ್ಲಿ ಸಂಚರಿಸಬಹುದು. ದಕ್ಷಿಣೋತ್ತರ ಭಾರತದ ಮುಖ್ಯ ಭಾಗಗಳಿಗೆ ಇದು ನೇರವಾದ ಮಾರ್ಗವಾಗಿ ಜನರಿಗೂ, ಸಾಮಾನು ಸಾಗಣಿಗೂ ಇದರಿಂದ ವಿಶೇಷ ಅನುಕೂಲವಾಗುತ್ತದೆ.

ಬೀರೂರು--ಶಿವಮೊಗ್ಗ; ಮೈಸೂರು--ನಂಜನಗೂಡು; ಬೆಂಗಳೂರು--ಮೈಸೂರು ರೈಲುಗಳು ಮಾತ್ರ ೧೯೧೮ ರಲ್ಲಿ ಕಂಪನಿಯ ಆಡಳಿತದಿಂದ

ಮೈಸೂರಿಗೆ ಬಂದವು. ಅದುವರೆಗೆ ಈ ಮಾರ್ಗಗಳು ಕಂಪನಿಯ ಅಧೀನದಲ್ಲೇ ಇದ್ದುವು. ೧೯೧೧ ರಲ್ಲಿ ಸಂಸ್ಥಾನದಲ್ಲಿ ೪೧೧ ಮೈಲಿ ಉದ್ದದ ರೈಲು ಮಾರ್ಗವಿತ್ತು. ವಿಶ್ವೇಶ್ವರಯ್ಯನವರು ನಿವೃತ್ತಿಯಾಗುವ ಹೊತ್ತಿಗೆ ೬೧೬ ಮೈಲಿಗೆ ಏರಿತು; ೪೬ ಮೈಲಿಗಳ ರೈಲು ರಸ್ತೆ ಮಾಡುವ ಕೆಲಸವೂ ನಡೆಯುತ್ತಿತ್ತು.

ಬೆಳೆಯುತ್ತಿರುವ ಬೆಂಗಳೂರಿನಲ್ಲಿ 'ಟ್ರಾಂವೆ' ವ್ಯವಸ್ಥೆ ಮಾಡಬೇಕೆಂಬುದು ವಿಶ್ವೇಶ್ವರಯ್ಯನವರ ಆಸೆ. ಇದಕ್ಕಾಗಿ ಅಂದಾಜು ಪಟ್ಟಿ ನಕ್ಷೆಗಳು ಸಿದ್ಧವಾದವು. ಟ್ರಾಂಗಳು ನಿಲ್ಲಲು 'ಷೆಡ್' ಸಹ ಸಿದ್ಧವಾಯಿತು. ಬೆಂಗಳೂರು ದಂಡಿನ ಅಧಿಕಾರಿಗಳಿಗೂ ಮೈಸೂರು ಸರ್ಕಾರಕ್ಕೂ ಇದರ ವೆಚ್ಚದ ವಿಷಯದಲ್ಲಿ ಭಿನ್ನಾಭಿಪ್ರಾಯ ತಲೆಹಾಕಿತು. ಈ ಭಿನ್ನತೆ ಸರಿಹೋಗುವವರೆಗೆ ಕೆಲಸವನ್ನು ಮುಂದುವರಿಸದೆ ನಿಲ್ಲಿಸಲಾಯಿತು.

ನದಿಗಳು, ಬೆಟ್ಟಗಳು, ದಟ್ಟವಾದ ಕಾಡುಗಳು, ಸಂಪದ್ಯುತವಾದ ಖನಿಜಗಳು ಮೊದಲಾಗಿ ಸಕಲ ಸೌಭಾಗ್ಯಗಳನ್ನೂ ಪಡೆದಿರುವ ಮೈಸೂರಿಗಿರುವ ದೊಡ್ಡ ಕೊರತೆ ರೇವು ಪಟ್ಟಣ. ಟಿಪ್ಪೂಸುಲ್ತಾನನೂ ಕೂಡ ರೇವು ಪಟ್ಟಣದ ಪ್ರಾಮುಖ್ಯತೆಯನ್ನು ಮನಗಂಡು ಮಂಗಳೂರನ್ನು ಮೈಸೂರಿನ ರೇವು ಪಟ್ಟಣವಾಗಿ ಮಾಡಿಕೊಳ್ಳಬೇಕೆಂದು ಹವಣಿಸುತ್ತಿದ್ದನು. ಆಧುನಿಕ ಕಾಲದಲ್ಲಿ, ಮುಖ್ಯವಾಗಿ ಹೊರದೇಶದ ವ್ಯಾಪಾರ ನಡೆಸಲು, ರೇವು ಪಟ್ಟಣ ಬಹಳ ಅಗತ್ಯ. ಭೂ ಮಾರ್ಗಕ್ಕಿಂತ ಜಲ ಮಾರ್ಗದಲ್ಲಿ ಸರಕು--ಸರಂಜಾಮುಗಳನ್ನು ಸುಲಭ ದರದಲ್ಲಿ ಸಾಗಿಸಬಹುದು. ಬಂದರು ಅಥವಾ ರೇವು ಇದ್ದರೆ ಮೈಸೂರಿನ ವ್ಯಾಪಾರ ಬೆಳೆಯಲು ಬಹಳ ಅನುಕೂಲವಾಗುತ್ತದೆ. ಮೈಸೂರಿನ ಹೊರ ವ್ಯಾಪಾರವು ಮದರಾಸು ಮತ್ತು ಬೊಂಬಾಯಿ ಬಂದರುಗಳ ಮುಖಾಂತರ ಈಗ ನಡೆಯಬೇಕಾಗಿದೆ ಪಶ್ಚಿಮ ತೀರವೇ ಮೈಸೂರಿಗೆ ಸಮೀಪ. ಈ ಸಮುದ್ರ ತೀರದಲ್ಲಿ ಶಿವಮೊಗ್ಗೆಗೆ ಅನತಿ ದೂರದಲ್ಲಿರುವ ಭಟ್ಕಳವನ್ನು ರೇವು ಪಟ್ಟಣವಾಗಿ ಮಾಡುವುದರಿಂದ ಬೊಂಬಾಯಿ, ಮದರಾಸು ಮೈಸೂರು ಈ ಮೂರು ಪ್ರಾಂತಗಳ ವ್ಯಾಪಾರಕ್ಕೂ ಅನುಕೂಲವಾಗುತ್ತದೆ

ಎಂದು ವಿಶ್ವೇಶ್ವರಯ್ಯನವರು ತೀರ್ಮಾನಿಸಿದರು. ತೀರದಲ್ಲಿ ಸಂಚರಿಸುವ ದೊಡ್ಡ ಜಹಜುಗಳು ಭಟ್ಕಳ ತೀರದಿಂದ ಒಂದು ಮೈಲಿ ಆಚೆ ಸಮುದ್ರದಲ್ಲಿ ಲಂಗರು ಹಾಕುತ್ತವೆ. ಅಲ್ಲಿಂದ ಸಣ್ಣ ದೋಣಿಗಳು ಸರಕುಗಳನ್ನೂ ಪ್ರಯಾಣಿಕರನ್ನೂ ದಡಕ್ಕೆ ತರುತ್ತವೆ. ಇಲ್ಲಿ ಮರಳನ್ನು ತೆಗೆಸಿ ಸರಿಯಾದ ಬಂದರನ್ನು ನಿರ್ಮಿಸಿದರೆ ದೊಡ್ಡ ಜಹಜುಗಳೂ ತೀರಕ್ಕೆ ಸಮೀಪದಲ್ಲಿಯೇ ಬಂದು ಲಂಗರು ಹಾಕಬಹುದು. ಭಟ್ಕಳ ಬಂದರಿನಿಂದ ನಾಲ್ಕು ದಿಕ್ಕುಗಳಿಗೂ ರೈಲು ಮಾರ್ಗ ಹಾಕಿದರೆ ಎಲ್ಲಕ್ಕೂ ಎಲ್ಲರಿಗೂ ಅನುಕೂಲವಾಗುತ್ತದೆ. ಇಂಜಿನಿಯರಿಂಗ್ ದೃಷ್ಟಿಯಿಂದ ಮಂಗಳೂರಿಗಿಂತ ಭಟ್ಕಳ ಬಂದರನ್ನು ನಿರ್ಮಿಸುವುದೇ ಸುಲಭ ಎಂದು ಸಾಕಷ್ಟು ವಿಷಯ ಸಂಗ್ರಹಿಸಿ ವಿಶ್ವೇಶ್ವರಯ್ಯನವರು ತೀರ್ಮಾನಿಸಿದರು. ಬಂದರು, ರೈಲ್ವೆ ನಿಲ್ದಾಣ ಇವುಗಳನ್ನು ನಿರ್ಮಿಸಲು ಹಿಡಿಯುವ ವೆಚ್ಚ; ಈಗ ನಡೆಯುತ್ತಿರುವ ವ್ಯಾಪಾರ; ಮುಂದೆ ನಡೆಯಬಹುದಾದ ವ್ಯಾಪಾರ ಇವುಗಳ ಅಂಕೆ—ಅಂಶಗಳನ್ನು ಸಂಗ್ರಹಿಸಿ, ಭಟ್ಕಳನ್ನು ಮೈಸೂರಿಗೆ ಕೊಡಿಸಬೇಕೆಂದು ಇಂಡಿಯಾ ಸರ್ಕಾರದೊಡನೆ ಪತ್ರವ್ಯವಹಾರ ಮಾಡತೊಡಗಿದರು ಈ ವಿಷಯವು ಮೈಸೂರು ಸಂಸ್ಥಾನದಲ್ಲಿ ವಿಶೇಷ ಉತ್ಸಾಹವನ್ನು ಕೆರಳಿಸಿತು. ಅನೇಕ ಸಂಸ್ಥೆಗಳೂ, ಸಾರ್ವಜನಿಕರೂ ಪತ್ರಿಕೆಗಳೂ ಭಟ್ಕಳವನ್ನು ರೇವು ಪಟ್ಟಣವಾಗಿ ಮಾಡಿಕೊಳ್ಳಲು ಮೈಸೂರಿಗೆ ಕೊಡಿಸಬೇಕೆಂದು ಮನವಿ ಮಾಡಿಕೊಂಡವು ಆದರ ಕೆಲಸ ಕೈಗೂಡುವುದರೊಳಗಾಗಿ ವಿಶ್ವೇಶ್ವರಯ್ಯನವರು ನಿವೃತ್ತರಾದರು.

## (೪) ಮೋಟಾರು ಮತ್ತು ವಿಮಾನ ಕಾರ್ಖಾನೆಗಳು

ಆಧುನಿಕ ಕಾಲವನ್ನು ಮೋಟಾರ್ ಮತ್ತು ಪೆಟ್ರೋಲ್ ಯುಗ ಎಂದು ಕರೆಯಬಹುದು ಭಾರತವು ಕೋಟ್ಯಂತರ ರೂಪಾಯಿ ಬೆಲೆ ಬಾಳುವ ಮೋಟಾರು ವಾಹನಗಳನ್ನು ಪರದೇಶಗಳಿಂದ ಪ್ರತಿ ವರ್ಷವೂ ತರಿಸುತ್ತದೆ. ಅಲ್ಲದೆ ಕೋಟ್ಯಾಂತರ ರೂಪಾಯಿ ವರ್ಷ ವರ್ಷವೂ, ಮೋಟಾರಿನ ಭಾಗಗಳು, ಪೆಟ್ರೋಲ್, ಎಣ್ಣೆಗಳಿಗಾಗಿ ನಮ್ಮ ದೇಶದಿಂದ ಹೊರಕ್ಕೆ ಹರಿದು ಹೋಗುತ್ತದೆ. ಯಾವ ದೇಶಭಕ್ತನಿಗಾದರೂ ಇದರಿಂದ ಸಂಕಟ

ವಾಗದೆ ಇರದು. ನಮ್ಮ ದೇಶದಲ್ಲಿಯೇ ಮೋಟಾರುಗಳನ್ನು ತಯಾರಿಸುವ ಕಾರ್ಖಾನೆಗಳಾಗಬೇಕೆಂಬುದು ವಿಶ್ವೇಶ್ವರಯ್ಯನವರ ಮಹದಿಚ್ಛೆಗಳಲ್ಲೊಂದು. ಇದಕ್ಕಾಗಿ ಇವರು ಪಟ್ಟಶ್ರಮ ಅಷ್ಟಿಷ್ಟಲ್ಲ. ಪರದೇಶಗಳಿಗೆ ಪ್ರವಾಸ ಹೋದಾಗಲೆಲ್ಲ ಅಲ್ಲಿಯ ಮೋಟಾರು ಕಾರ್ಖಾನೆಗಳನ್ನು ಅದರ ವ್ಯವಸ್ಥಾಪಕರನ್ನೂ ಕಂಡು ಭಾರತದಲ್ಲಿಯೂ ಮೋಟಾರುಗಳ ನಿರ್ಮಾಣದ ವ್ಯವಸ್ಥೆ ಮಾಡಬೇಕೆಂದು ಪ್ರಸ್ತಾಪಿಸುತ್ತಿದ್ದರು. ೧೯೦೮ ರಲ್ಲಿ ಅವರ ದ್ವಿತೀಯ ಪಾಶ್ಚಿಮಾತ್ಯದ ಪರ್ಯಟನದಲ್ಲಿ ಡೆಟ್ರಾಯಿಟ್ ನಗರಕ್ಕೆ ಹೋಗಿ, ಲೋಕ ವಿಖ್ಯಾತವಾದ ಫೋರ್ಡ್ ಕಂಪನಿಗೆ ಭೇಟಿ ಕೊಟ್ಟಿದ್ದರು. ೧೯೩೫ ರಲ್ಲಿ ಐದನೆಯ ಬಾರಿ ಪ್ರಪಂಚ ಯಾತ್ರೆ ಕೈಗೊಂಡು ಆರು ತಿಂಗಳ ಕಾಲ ಮೋಟಾರು ತಯಾರಿಕೆಯ ವಿಷಯವನ್ನು ಸಮಗ್ರವಾಗಿ ಪರಿಶೀಲಿಸುವುದರಲ್ಲಿಯೇ ಕಳೆದರು. ಯೂರೋಪ್‌ನಲ್ಲಿ ಅಥವಾ ಅಮೆರಿಕದಲ್ಲಿ ಮೋಟಾರು ತಯಾರಿಸುವವರೊಡನೆ ಒಪ್ಪಂದ ಮಾಡಿಕೊಂಡು ಭಾರತದಲ್ಲಿಯೂ ಮೋಟಾರು ತಯಾರಿಸುವ ಕಾರ್ಖಾನೆ ಸ್ಥಾಪಿಸಬೇಕೆಂಬುವುದೇ ಇವರ ಉತ್ಕಟ ಅಭಿಲಾಷೆ. ಇಂಗ್ಲೆಂಡ್, ಫ್ರಾನ್ಸ್, ಜರ್ಮನಿ, ಇಟಲಿ, ಕೆನಡ ಅಮೆರಿಕ ಈ ದೇಶಗಳಿಗೆ ಇದಕ್ಕಾಗಿಯೇ ಭೇಟಿ ಇತ್ತರು. ಬರ್ಮಿಂಗ್ ಹ್ಯಾಂನಲ್ಲಿ 'ಆಸ್ಟಿನ್' ಕಂಪನಿಯ ಮಾಲಿಕರನ್ನು ಭೇಟಿ ಮಾಡಿದರು. ಅಲ್ಲದೆ ಕವೆಂಟ್ರಿ, ಆಕ್ಸ್‌ಫರ್ಡ್, ಡರ್ಬಿ ಈ ಸ್ಥಳಗಳಲ್ಲಿಯ ಕಾರ್ಖಾನೆಗಳನ್ನೂ ನೋಡಿಬಂದರು. ಇಟಲಿಯಲ್ಲಿ 'ಫಯಟ್' ಕಂಪನಿಗೆ ಹೋಗಿದ್ದರು. ಫಯಟ್ ಮೋಟಾರು ಏಳು--ಅಂತಸ್ತಿನ ಕಟ್ಟಡದಲ್ಲಿ ತಯಾರಾಗುತ್ತಿದುದು ಒಂದು ಸೋಜಿಗ. ಕೆಳಗಿನಿಂದ ಮೇಲಕ್ಕೆ ಚಕ್ರಾಕಾರವಾಗಿ ಸುತ್ತುವ ಟ್ರಾಂ ಗಾಡಿಯು ಮೋಟಾರಿನ ಭಾಗಗಳನ್ನು ಒಯ್ಯುವುದು. ಉಭಯ ಭಾಗಗಳಲ್ಲಿಯೂ ಕೆಲಸಗಾರರು ನಿಂತು ಬೇಕಾದ ಭಾಗಗಳನ್ನು ತೆಗೆದುಕೊಂಡು ಜೋಡಿಸಿ ವಾಹನವನ್ನು ಸಿದ್ಧಗೊಳಿಸುವರು. ಸ್ಥಳಾಭಾವದಿಂದ ಈ ಯುಕ್ತಿ. ಅಮೆರಿಕದಲ್ಲಿ ಜನರಲ್ ಮೋಟಾರ್ಸ್ ಮತ್ತು ಫೋರ್ಡ್ ಕಂಪನಿಯ ವ್ಯವಸ್ಥಾಪಕರನ್ನು ಹಲವು ಬಾರಿ ನೋಡಿ ಭಾರತದಲ್ಲಿ ಮೋಟಾರು ಕಾರ್ಖಾನೆ ಸ್ಥಾಪಿಸಲು ಬೇಕಾಗುವ ಹಣಕಾಸಿನ ಅಂದಾಜ ಪಟ್ಟಿಯನ್ನು ಸಿದ್ಧಗೊಳಿಸಿದರು. ಇವರು ಸಿದ್ಧಗೊಳಿಸಿದ ವರದಿ ಭಾರತದಲ್ಲಿ ಎರಡಾವರ್ಷಿ

ಮುದ್ರಿತವಾಯಿತು. ಆದರೆ ಅದರಿಂದ ಯಾವ ಪ್ರಯೋಜನವೂ ಆಗಲಿಲ್ಲ. ಇಂಡಿಯಾ ಸರ್ಕಾರವೇ ಈ ಪ್ರಯತ್ನಕ್ಕೆ ವಿರುದ್ಧವಾಗಿತ್ತು

ವರ್ಷಕ್ಕೆ ೫೦೦೦ 'ಟ್ರಕ್' ಮೋಟಾರುಗಳನ್ನು ತಯಾರಿಸಲು ಅವಕಾಶ ಮತ್ತು ಸೈನ್ಯ ಇಲಾಖೆ ಈ ಗಾಡಿಗಳನ್ನು ಕೊಂಡು ಪ್ರೋತ್ಸಾಹ ನೀಡುವುದಾಗಿ ಭರವಸೆ ಕೊಟ್ಟರೆ ಅಷ್ಟೇ ಸಾಕೆಂದು ಮಾಡಿದ ಪ್ರಯತ್ನ ಗಳೂ ನಿಷ್ಪ್ರಯೋಜಕವಾದುವು ಆದರೆ ವಿಶ್ವೇಶ್ವರಯ್ಯನವರು ಧೃತಿ ಗೆಡಲಿಲ್ಲ ಮೈಸೂರಿನಲ್ಲಿ ಕಂಪನಿಯನ್ನು ಸ್ಥಾಪಿಸಲು ಪ್ರಯತ್ನಿಸಿದರು. ದಿವಾನ್ ಮಿರ್ಜಾರವರೂ ಪೂರ್ಣ ಬೆಂಬಲ ನೀಡಿದರು. ಆದರೆ ಇಂಡಿಯಾ ಸರ್ಕಾರದ ಪ್ರೇರಣೆಯಿಂದ ಬ್ರಿಟಿಷ್ ರೆಸಿಡೆಂಟರು ಈ ಪ್ರಯತ್ನವನ್ನು ತಡೆಗಟ್ಟುವಂತೆ ಮಹಾರಾಜರಿಗೆ ತಿಳಿಸಿದರು ಸ್ವಾತಂತ್ರ್ಯ ಹೀನವಾದ ದೇಶ ಆರ್ಥಿಕವಾಗಿ ಮುಂದುವರಿಯಲೂ ಸಹ ಎಷ್ಟು ಅಡಚಣೆಗಳಿವೆ ಎಂಬುದನ್ನು ಮನಗಂಡು ವಿಶ್ವೇಶ್ವರಯ್ಯನವರು ಖತಿಗೊಂಡರು. ಈ ಉದ್ಯಮಕ್ಕೆ ಪೂರ್ಣ ಸಹಕಾರ ನೀಡುವುದಾಗಿ ಮೊದಲು ಭರವಸೆ ಕೊಟ್ಟಿದ್ದ ಅನೇಕ ಬೊಂಬಾಯಿನ ಗಣ್ಯ ವರ್ತಕರೂ ಹಿಂದಕ್ಕೆ ಸರಿದರು. ಸರ್ಕಾರದ ವಿರೋಧ ಕಟ್ಟಿಕೊಳ್ಳಲು ಯಾವ ಧನಿಕ ತಾನೆ ಮುಂದೆ ಬಂದಾನು?

ಇದೇ ಸಂದರ್ಭದಲ್ಲಿ ಸ್ವಾತಂತ್ರ್ಯ ಗಳಿಸಿದ್ದ ರಷ್ಯಾದ ೪೦ ಇಂಜಿನಿಯರುಗಳ ತಂಡ ತಮ್ಮ ದೇಶದಲ್ಲಿ ಮೋಟಾರು ತಯಾರಿಕೆ ಕಾರ್ಖಾನೆ ಸ್ಥಾಪಿಸುವ ಸಲುವಾಗಿ ಅಮೆರಿಕಕ್ಕೆ ಬಂದಿತ್ತು. ಈ ತಂಡದ ಹಲವರ ಭೇಟಿ ಇವರಿಗೆ ಲಭಿಸಿತು. ಸ್ವತಂತ್ರ ರಾಜ್ಯಕ್ಕೂ ಪರತಂತ್ರ ರಾಜ್ಯಕ್ಕೂ ಇರುವ ಭಿನ್ನತೆ ಇವರನ್ನು ಅಣಕವಾಡುವಂತೆ ತೋರುತ್ತಿತ್ತು. ರಷ್ಯದವರಿಗೆ ಅಷ್ಟು ಗೌರವ. ಭಾರತ ಸ್ವಾತಂತ್ರ್ಯಗಳಿಸುವವರೆಗೂ ಈ ಪ್ರಯತ್ನ ಫಲಿಸಲಿಲ್ಲ. ವಿಶ್ವೇಶ್ವರಯ್ಯನವರೂ ವಿಮುಖರಾಗಲಿಲ್ಲ.

ದ್ವಿತೀಯ ಘೋರ ಯುದ್ಧ ಮುಗಿಯುವವರೆಗೂ ಈ ಪ್ರಯತ್ನ ಕೈಗೂಡುವ ಚಿಹ್ನೆಗಳು ಕಂಡುಬರಲಿಲ್ಲ. ಬ್ರಿಟಿಷರು ಅದನ್ನು ಆಗಗೊಡರು. ಭಾರತವು ಸ್ವಾತಂತ್ರ್ಯ ಗಳಿಸಿದ ಮೇಲೆಯೇ ಈ ಪ್ರಯತ್ನ ಫಲಿಸಲು ಸಾಧ್ಯವಾಯಿತು ಕೇಂದ್ರದಲ್ಲಿಯೂ ಪ್ರಾಂತಗಳಲ್ಲಿಯೂ ಕಾಂಗ್ರೆಸ್ ಸರ್ಕಾರ

ಸ್ಥಾಪನೆಯಾಗುತ್ತಲೇ ವಿಶ್ವೇಶ್ವರಯ್ಯನವರು ತಮ್ಮ ಪ್ರಯತ್ನವನ್ನು ಮತ್ತೆ ಪ್ರಾರಂಭಿಸಿದರು. ಬೆಂಗಳೂರಿನಲ್ಲಿ ವಿಮಾನ ಕಾರ್ಖಾನೆಯ ಸ್ಥಾಪನೆಗೆ ಮೂಲ ಪುರುಷರಾದ ಶ್ರೀ ವಾಲ್‌ಚಂದ್ ಹೀರಾಚಂದ್‌ರೂ ಅವರ ಮಿತ್ರರೂ ಬೊಂಬಾಯಿನಲ್ಲಿ ಮೋಟಾರು ಕಾರ್ಖಾನೆ ಸ್ಥಾಪಿಸಲು ಮುಂದೆ ಬಂದರು. ಕಾಂಗ್ರೆಸ್ ಸರ್ಕಾರವೂ ಈ ಪ್ರಯತ್ನಕ್ಕೆ ಪ್ರೋತ್ಸಾಹ ನೀಡಿತು. ಕೈಗಾರಿಕೆ ಇಲಾಖೆಯ ಮುಖ್ಯಾಧಿಕಾರಿಗಳನ್ನು ಈ ಕೆಲಸಕ್ಕಾಗಿಯೇ ಮೀಸಲಾಗಿಟ್ಟಿತು. ಲಾಲ್‌ಚಂದ್‌ರೂ, ಕೈಗಾರಿಕೆಯ ಮುಖ್ಯಾಧಿಕಾರಿಯೊಬ್ಬರೂ ವಿಶ್ವೇಶ್ವರಯ್ಯನವರ ವರದಿಯ ಆಧಾರದ ಮೇಲೆ ಅಮೆರಿಕದ ಡೆಟ್ರಾಯಿಟ್ ನಗರಕ್ಕೆ ಹೋಗಿ ಫೋರ್ಡ್ ಕಂಪನಿಯ ಮಾಲೀಕರಾದ ಹೆನ್ರಿ ಫೋರ್ಡನ್ನೇ ಸ್ವಂತವಾಗಿ ಭೇಟಿಯಾದರು ಮೊಟ್ಟಮೊದಲು ಈ ಪ್ರಯತ್ನ ಫಲಿಸುವಂತೆ ತೋರಿದರೂ, ಅವರ ಕರಾರುಗಳು ಒಪ್ಪಿಕೊಳ್ಳುವಂತಿರಲಿಲ್ಲ ಭಾರತದಲ್ಲಿ ಸ್ಥಾಪಿತವಾಗುವ ಕಂಪನಿಯ ಮೇಲ್ವಿಚಾರಣೆ ತಮ್ಮ ಅಧೀನದಲ್ಲಿರಬೇಕೆಂದು ಅವರು ಬಯಸಿದ್ದೇ ಕಾರಣ. ಆದರೆ ದೇಶಭಕ್ತರೂ ಸಾಹಸಿಗಳೂ ಆದ ಲಾಲ್‌ಚಂದರು ತಮ್ಮ ಪ್ರಯತ್ನವನ್ನು ಅಷ್ಟಕ್ಕೇ ನಿಲ್ಲಿಸಲಿಲ್ಲ. ಅದೇ ಊರಿನ ಕ್ರೈಸ್ಲರ್ ಕಂಪನಿಯ ಸಂಪರ್ಕ ಬೆಳಸಿ ಅವರೊಡನೆ ಸಮರ್ಪಕವಾದ ಒಪ್ಪಂದಕ್ಕೆ ಬಂದರು ಇದರ ಫಲವಾಗಿ ಬೊಂಬಾಯಿಯಲ್ಲಿ 'ಪ್ರೀಮಿಯರ್ ಆಟೋಮೊಬೈಲ್ ಕಂಪನಿ' ಎಂಬ ಹೆಸರಿನಲ್ಲಿ ಭಾರತದ ಮೊಟ್ಟಮೊದಲ ಮೋಟಾರ್ ಕಾರ್ಖಾನೆ ಸ್ಥಾಪಿತವಾಯಿತು

ವಿಶ್ವೇಶ್ವರಯ್ಯನವರು ೧೯೦೮ ರಲ್ಲಿ ಮೊದಲು ಮಾಡಿದ ಪ್ರಯತ್ನ ಕೈಗೂಡಲು ೪೦ ವರ್ಷಗಳ ದೀರ್ಘಕಾಲ ಬೇಕಾಯಿತು. ಆದರೆ ಈಗ ಸ್ಥಾಪಿತವಾಗಿರುವುದಾದರೂ ವಿಶ್ವೇಶ್ವರಯ್ಯನವರ ಅಭೀಷ್ಟದ ಪರಿಪೂರ್ಣ ಕಾರ್ಖಾನೆಯಲ್ಲ ಪರದೇಶದಲ್ಲಿ ತಯಾರಾದ ಭಾಗಗಳನ್ನು ಭಾರತಕ್ಕೆ ತಂದು ಜೋಡಿಸುವ, ಕೇವಲ ಜೋಡಣೆ ಕಾರ್ಖಾನೆಯಾಗಿದೆ. ಅವರ ಬಯಕೆ ಇಂದಿಗೂ ತೃಪ್ತಿಯಾಗಿಲ್ಲ.

ಮೋಟಾರು ಕಾರ್ಖಾನೆಯನ್ನು ಸ್ಥಾಪಿಸಲು ವಿಶ್ವೇಶ್ವರಯ್ಯನವರಿಗೆ ಎಷ್ಟು ಉತ್ಸಾಹವಿತ್ತೋ ವಿಮಾನ ಕಾರ್ಖಾನೆಯನ್ನು ಸ್ಥಾಪಿಸಬೇಕೆಂದೂ ಅಷ್ಟೇ ಉತ್ಸಾಹ. ಈ ಬೊಂಬಾಯಿ ನಗರದ ವಾಲ್‌ಚಂದ್‌ರು ಬೆಂಗಳೂರಿ

ನಲ್ಲಿ ವಿಮಾನ ಕಾರ್ಖಾನೆಯನ್ನು ಸ್ಥಾಪಿಸಲು ಪ್ರೇರೇಪಿಸಿದವರು ವಿಶ್ವೇಶ್ವರಯ್ಯನವರೇ. ಇವರು ಬಿತ್ತಿದ ಬೀಜ ಸರ್ ಮಿರ್ಜಾ ಇಸ್ಮಾಯಿಲರ ಕಾಲದಲ್ಲಿ ಫಲಿಸಿತು. ಮೋಟಾರು ಕಾರ್ಖಾನೆಯಂತೆಯೇ ವಿಮಾನ ಕಾರ್ಖಾನೆ ಸ್ಥಾಪಿಸುವುದಕ್ಕೂ ಇಂಡಿಯಾ ಸರ್ಕಾರವು ಪ್ರೋತ್ಸಾಹ ಕೊಡಲಿಲ್ಲ. ವಾಲ್ ಚಂದ್‌ರು ಅಮೆರಿಕದ ನಿಪುಣರ ಸಲಹೆ ಪಡೆದು, ಭಾರತದಲ್ಲಿ ವಿಮಾನ ಕಾರ್ಖಾನೆಯನ್ನು ಸ್ಥಾಪಿಸುವ ಸಾಧ್ಯತೆಯನ್ನು ಕುರಿತು ಭಾರತದ ಪ್ರಧಾನ ದಳಪತಿಗೆ ಪತ್ರ ಬರೆದರು. ಆರು ತಿಂಗಳ ಕಾಲ ಇವರ ಕಡೆ ಸೈನ್ಯಾಧಿಪತಿಗಳಾಗಲಿ, ಇಂಡಿಯಾ ಸರ್ಕಾರವಾಗಲಿ ಗಮನವನ್ನೇ ಕೊಡಲಿಲ್ಲ ಈ ವೇಳೆಗೆ ದ್ವಿತೀಯ ಲೋಕಸಂಗ್ರಾಮ ನಡೆಯುತ್ತಿತ್ತು. ಬ್ರಿಟಿಷರು ಡರ್ಕರ್ಕ್ ನಗರದ ಮೂಲಕ ಜರ್ಮನಿಯ ಮೇಲೆ ದೊಡ್ಡ ಧಾಳಿ ನಡೆಸಬೇಕೆಂದು ಹವಣಿಸಿ, ಅತುಲ ಶ್ರಮದಿಂದ ಸಂಗ್ರಹಿಸಿದ್ದ ಅಪಾರ ಯುದ್ಧ ಸಲಕರಣೆಗಳನ್ನು ಅಲ್ಲೇ ಬಿಟ್ಟು, ಜೀವ ಉಳಿದರೆ ಸಾಕೆಂದು ಹಿಂದೋಡಿ ಬಂದರು. ಈ ಅಪಜಯವು ಬ್ರಿಟಿಷ್ ಸರ್ಕಾರದ ಕಣ್ಣು ತೆರೆಯಿಸಿತು. ಯೂರೋಪಿನಲ್ಲಿ ಮಾತ್ರವಲ್ಲದೆ, ತಮ್ಮ ವಸಾಹತ್ತಾದ ಏಷ್ಯಾದಲ್ಲಿಯೂ ವಿಮಾನ ಮತ್ತು ಯುದ್ಧಕ್ಕೆ ಬೇಕಾಗುವ ಯಂತ್ರೋಪಕರಣಗಳನ್ನು ತಯಾರಿಸುವ ಆವಶ್ಯಕತೆಯನ್ನು ಮನಗಂಡರು. ಇದರ ಫಲವಾಗಿ ವಾಲ್‌ಚಂದ್ ಹೀರಾಚಂದರಿಗೆ ಬೆಂಗಳೂರಿನಲ್ಲಿ ವಿಮಾನ ಕಾರ್ಖಾನೆ ಸ್ಥಾಪಿಸುವ ಅನುಮತಿ ದೊರೆಯಿತು. ನಿಜವಾಗಿ ಮೊದಲು ದೊರೆತದ್ದು ಮೋಟಾರು ತಯಾರಿಕೆ ಕಾರ್ಖಾನೆಯನ್ನು ಸ್ಥಾಪಿಸಲು ಅವಕಾಶ. ಅನಂತರ ಈ ಮೋಟಾರು ಕಾರ್ಖಾನೆಯೇ ವಿಮಾನ ಕಾರ್ಖಾನೆಯಾಯಿತು. ಈಗ ಈ ಕಾರ್ಖಾನೆ ಇಂಡಿಯ ಮತ್ತು ಮೈಸೂರು ಸರ್ಕಾರಗಳ ಅಧೀನದಲ್ಲಿದೆ. ಇದು ಏಷ್ಯದಲ್ಲಿಯೇ ಅತ್ಯಂತ ದೊಡ್ಡ ಕಾರ್ಖಾನೆ ಎಂದು ಖ್ಯಾತಿಗಳಿಸಿದೆ. ಪರದೇಶಗಳಿಂದ ವಿಮಾನದ ಭಾಗಗಳನ್ನು ತರಿಸಿ ಜೋಡಿಸುವುದು, ರಿಪೇರಿ, ಅಲ್ಲದೆ ಭಾರತದಲ್ಲಿಯೇ ತಯಾರಾದ ಭಾಗಗಳಿಂದ ವಿಮಾನದ ತಯಾರಿಕೆ ಇಲ್ಲಿ ನಡೆಯುತ್ತಿದೆ.

ಮೈಸೂರು ಸೀಮೆ ಗಂಧದ ಮರಕ್ಕೆ, ಗಂಧದ ಎಣ್ಣೆಗೆ, ಗಂಧದ ಕಲಾಕೃತಿಗಳಿಗೆ, ಗಂಧದ ಸಾಬೂನಿಗೆ ಪ್ರಸಿದ್ಧವಾಗಿದೆ. ದಿವಂಗತ ಬಿ. ಎಂ. ಶ್ರೀ.

ಅವರು ಹಾಡಿರುವಂತೆ, 'ಗಂಧದ ನಾಡಿದು ಮೈಸೂರು' ಎಂಬುದಕ್ಕೆ ಅನ್ವರ್ಥವಾಗಿದೆ. ವಿಶ್ವೇಶ್ವರಯ್ಯನವರ ಪ್ರಯತ್ನಕ್ಕೆ ಮೊದಲು ಗಂಧದ ಮರದ ತುಂಡುಗಳು ಜರ್ಮನಿ, ಇಂಗ್ಲೆಂಡ್, ಫ್ರಾನ್ಸ್ ಮೊದಲಾದ ದೇಶಗಳಿಗೆ ರಫ್ತಾಗುತ್ತಿತ್ತು. ಅಲ್ಲಿ ಅದರಿಂದ ಎಣ್ಣೆ ತೆಗೆದು ಮತ್ತೆ ಭಾರತಕ್ಕೆ ಅದನ್ನು ಕಳುಹಿಸುತ್ತಿದ್ದರು ಈ ಅಸಹಜ-ಅಕ್ರಮವನ್ನು ತಡೆಗಟ್ಟಿದ ಕೀರ್ತಿ ವಿಶ್ವೇಶ್ವರಯ್ಯನವರದು ಗಂಧದ ಮರದಿಂದ ಎಣ್ಣೆ ತೆಗೆಯುವ ಕಾರ್ಖಾನೆಗಳು ಸಂಸ್ಥಾನದಲ್ಲಿ ಸ್ಥಾಪಿತವಾಗಿ ಲಕ್ಷಾಂತರ ರೂಪಾಯಿ ಆದಾಯವಾಗುತ್ತಿದೆ. ಅತ್ಯುತ್ತಮವೂ ಶುದ್ಧವೂ ಆದ ಮೈಸೂರಿನ ಪರಿಮಳವನ್ನು ದಶದಿಕ್ಕುಗಳಿಗೂ ಬೀರಲು ಸಹಾಯವಾಗಿದೆ. ಅನೇಕ ಸುಗಂಧ ದ್ರವ್ಯಗಳಿಗೆ ಆಧಾರವಾದ ಈ ಎಣ್ಣೆ ಪ್ರಪಂಚದ ಅನೇಕ ಭಾಗಗಳಿಗೆ ಈಗ ರಫ್ತಾಗುತ್ತಿದೆ. ಇದೇ ರೀತಿ ಸಾಬೂನು ತಯಾರಿಸುವ ಕಾರ್ಖಾನೆಯೂ ಬೆಂಗಳೂರಿನಲ್ಲಿ ೧೯೧೬ ರಲ್ಲಿ ಸ್ಥಾಪಿತವಾಯಿತು. ಚರ್ಮ ಹದಮಾಡುವ ಕಾರ್ಖಾನೆ, ಬಣ್ಣದ ಕಾರ್ಖಾನೆ ಮೊದಲಾಗಿ ಇನ್ನೂ ಅನೇಕ ಸಣ್ಣ ದೊಡ್ಡ ಕೈಗಾರಿಕೆಗಳು ಇಲ್ಲಿ ತಲೆದೋರಲು ಇವರ ಪ್ರೋತ್ಸಾಹವೇ ಮುಖ್ಯ ಕಾರಣ. ಕಾಗದ ತಯಾರಿಕೆ, ಪೆನ್ಸಿಲ್ ತಯಾರಿಕೆಯ ಕಾರ್ಖಾನೆ ಪ್ರಯತ್ನವೂ ಇವರ ಕಾಲದಲ್ಲೇ ನಡೆಯಿತು ಕಾಗದದ ಕಾರ್ಖಾನೆ ಇವರ ದಿವಾನಗಿರಿ ಅವಧಿಯ ನಂತರ ಭದ್ರಾವತಿಯಲ್ಲಿ ಸ್ಥಾಪಿತವಾಗಿ ಯಶಸ್ವಿಯಾಗಿ ನಡೆಯುತ್ತಿದೆ. ಆದರೆ ಪೆನ್ಸಿಲ್ ತಯಾರಿಸುವ ಕಾರ್ಖಾನೆ ಇದುವರೆಗೂ ಸ್ಥಾಪಿತವಾಗಿಲ್ಲ.

ಈ ದೊಡ್ಡ ಕೈಗಾರಿಕೋದ್ಯಮಗಳು ದೇಶದ ಆರ್ಥಿಕ ಪರಿಸ್ಥಿತಿಯನ್ನು ಉತ್ತಮಗೊಳಿಸಿದುವು ಪೌರ್ವಾತ್ಯರಿಗೆ, ಭಾರತೀಯರಿಗೆ ದುಸಾಧ್ಯವೆಂಬುದನ್ನು ನಾವೂ ಸಾಧಿಸಬಲ್ಲೆವು ಎಂಬ ಆತ್ಮ ವಿಶ್ವಾಸ, ಸ್ವಾಭಿಮಾನ, ಸಾಧನಾ ಶಕ್ತಿ, ಹೆಮ್ಮೆ, ದೇಶಭಕ್ತಿ ಬೆಳೆದು ದೇಶದಲ್ಲಿ ನವಚೈತನ್ಯ, ನವಶಕ್ತಿ ಜನರಲ್ಲಿ ಹರಿಯ ತೊಡಗಿತು. ಜನರಲ್ಲಿದ್ದ ನಿದ್ದೆ, ಬಡತನ ಹಾರಿಹೋಯಿತು. ಈ ಆಧುನಿಕ ವಿಜ್ಞಾನ ಯುಗದಲ್ಲಿ ಕೈಕಟ್ಟಿ ಕಣ್ಮುಚ್ಚಿ ಹಳೆಯದನ್ನೇ ನಂಬಿ ಕುಳಿತರೆ ಪ್ರಯೋಜನವಿಲ್ಲ. ನಮ್ಮಲ್ಲಿಯೂ ಕೈಗಾರಿಕೆಗಳು ಬೆಳೆಯಬೇಕು. ನಾವೂ ಬೆಳೆಸ ಬಲ್ಲೆವು ದುಡಿಯಬೇಕು ಗಳಿಸಬೇಕು. ದೇಶ ಸಂಪತ್

ಸಂವೃದ್ಧಿಯಾಗಬೇಕು ಎಂಬ ಆಸೆ ಲವಲವಿಕೆ ಸ್ಫೂರ್ತಿ ಗುಡ್ಸ್ ಗಾಡಿಯನ್ನು ಎಕ್ಸ್‌ಪ್ರೆಸ್ ಗಾಡಿಯಾಗಿ ನಾಗಾ ಲೋಟದಿಂದ ಓಡುವಂತೆ ಮಾಡಿತು.

"ಪ್ರಪಂಚದಲ್ಲೇ ಅತ್ಯಂತ ಹಿರಿಯ ಶ್ರೇಣಿಗೆ ಸೇರಿದ ಕೃಷ್ಣರಾಜಸಾಗರವೊಂದೇ ಸಾಕು ಸರ್ ವಿಶ್ವೇಶ್ವರಯ್ಯನವರ ಹೆಸರನ್ನು ಶಾಶ್ವತಗೊಳಿಸಲು. ಸಂಸ್ಥಾನವು ಕೈಗೊಂಡಿರುವ ಇತರ ಭಾರಿ ಉದ್ಯಮಗಳು, ಭಾರತದ ಇತರ ಭಾಗಗಳಿಗಿಂತ ಮೈಸೂರು ಯಾವ ರೀತಿ ಮುಂಬರಿದಿದೆ ಎಂಬುದನ್ನೂ, ಆದರ ಉದ್ಯಮ ಶೀಲತೆಯನ್ನೂ ಹೊರಸೂಸುತ್ತಿವೆ" ಎಂದು ಜುಲೈ ೧೯೩೭ ರಲ್ಲಿ, ಎಂದರೆ ವಿಶ್ವೇಶ್ವರಯ್ಯನವರು ನಿವೃತ್ತರಾದ ಒಂಭತ್ತು ವರುಷಗಳ ತರುವಾಯ ಮೈಸೂರಿಗೆ ಭೇಟಿಯಿತ್ತ ಮಹಾತ್ಮ ಗಾಂಧಿಯವರು ನುಡಿದರು. ಭದ್ರಾವತಿ ಮತ್ತು ಕೃಷ್ಣರಾಜಸಾಗರದ ವಿಷಯವಾಗಿ ನಡೆಯುತ್ತಿದ್ದ ಅಪನಿಂದೆ-ಅಪಪ್ರಚಾರಗಳು ಮಹಾತ್ಮರವರೆಗೂ ಮುಟ್ಟಿ ಸತ್ಯಾಂಶವನ್ನು ಸ್ವತಃ ಅರಿಯುವುದಕ್ಕಾಗಿಯೇ ಮಹಾತ್ಮರು ಆಗ ಮೈಸೂರಿಗೆ ದಯಮಾಡಿಸಿದ್ದುದು.

# ಸಾಮಾಜಿಕ ಸುಧಾರಣೆ

ವಿಶ್ವೇಶ್ವರಯ್ಯನವರು ಕೇವಲ ಐಹಿತ ಸಂಪತ್ತಿನ ಪ್ರವಾದಿಗಳೆಂದು ಕೆಲವು ವೇಳೆ ಟೀಕೆಗೆ ಗುರಿಯಾಗಿದ್ದಾರೆ. ಅವರ ಮಾತಿನಲ್ಲಿ ಆಧ್ಯಾತ್ಮಿಕ ಸಂಗತಿಗಳ ಪ್ರಸಕ್ತಿ ಹೆಚ್ಚಾಗಿ ತಲೆದೋರುವುದಿಲ್ಲ ಎನ್ನುವುದು ನಿಜ ಅವರು ಕರ್ಮಠರಲ್ಲ ಹಳೆಯ ಸಂಪ್ರದಾಯವಾದಿಗಳಲ್ಲ. ಕರ್ಮ, ಹಣೆಬರಹ, ಆದದ್ದೇ ಸರಿ, ಇದು ಲಲಾಟ ಲಿಖಿತ ಎಂಬ ನಿರಾಶಾ ಮನೋಭಾವನೆಯಿಂದ ಕೈ ಕಟ್ಟಿ ಕೂಡುವವರಲ್ಲ. ಅವರು ಕರ್ಮ ಯೋಗಿಗಳು, ಕ್ರಿಯಾವಂತರು, ಕರ್ಮವೇ ತಪಸ್ಸು, ಮಾನವ ಸೇವೆಯೇ ದೈವಪೂಜೆ ಎಂಬುದು ಅವರ ನಂಬಿಕೆಯ ಸಾರ ಸರ್ವ. ಹೀಗಾದರೂ ಅವರು ಶ್ರದ್ಧಾವಂತ ಸಮಾಜ ಸುಧಾರಕರೂ ಹೌದು.

ಅಂತ್ಯಜರ ಉದ್ಧಾರ, ಹಿಂದುಳಿದ ಪಂಗಡಗಳ ಅಭಿವೃದ್ಧಿ, ಸ್ತ್ರೀಯರ ಏಳಿಗೆ, ವಿಧವಾ ವಿವಾಹ, ಹಿಂದೂ--ಮುಸಲ್ಮಾನರಲ್ಲಿರುವ ಅನೇಕ ದುಷ್ಟ ಪದ್ಧತಿಗಳ ಸುಧಾರಣೆ ಇವುಗಳಲ್ಲಿ ವಿಶ್ವೇಶ್ವರಯ್ಯನವರ ದೂರದೃಷ್ಟಿ ಮತ್ತು ಧೈರ್ಯ ಬೆಳಕಿಗೆ ಬರುತ್ತದೆ. ಈಗ ಕಾಲ ಬಹಳ ಸುಧಾರಿಸಿದೆ. ಸಹಪಂಕ್ತಿ ಭೋಜನ ನಿಷಿದ್ಧ, ಸಮುದ್ರಯಾನ ಮಾಡಿದವರು ಬಹಿಷ್ಕಾರ ಯೋಗ್ಯರು, ಹೆಣ್ಣು ಮಕ್ಕಳು ಶಾಲೆಗೆ ಹೋಗುವುದು ಸಂಪ್ರದಾಯಕ್ಕೆ ವಿರುದ್ಧವಾದ ಮಹಾಪರಾಧ ಎಂದಿದ್ದ ಆ ಕಾಲದಲ್ಲಿ ಇವರು ಕೈಗೊಂಡ ಸುಧಾರಣೆಗಳು ಬಹಳ ಪ್ರಗತಿಪರವಾಗಿದ್ದುವು ಆಗಿನ ಕಾಲದಲ್ಲಿ ಬ್ರಾಹ್ಮಣರ ಕೇರಿಯಲ್ಲಿ ಅಂತ್ಯಜರಿಗೆ ಪ್ರವೇಶವೇ ಇರಲಿಲ್ಲ. ಅಂತ್ಯಜರ ಮೈ ಸೋಂಕಿದರೆ, ದೃಷ್ಟಿ ತಾಕಿದರೆ ಸವರ್ಣರು ಸ್ನಾನ ಮಾಡಬೇಕಾಗಿತ್ತು. ಕೆರೆ ಬಾವಿಗಳಿಂದ ಅವರು ನೀರು ತೆಗೆಯುವಂತಿಲ್ಲ ಮಹಮ್ಮದೀಯ ಹೆಂಗಸರು ಬೆಳಕನ್ನೇ ಕಾಣುವಂತಿರಲಿಲ್ಲ. ಅವರ ಸ್ತ್ರೀಯರು ಕಾಯಿಲೆಯಾದರೆ ಪರದೆಯ ಹಿಂದೆ ನಿಂತು ಒಂದು ಕಿಂಡಿಯಿಂದ ಕೈ ಚಾಚುವರು. ರೋಗಿಯ ಮುಖ ನೋಡದೆ ವೈದ್ಯ ಕಾಯಿಲೆಯನ್ನು ಗೊತ್ತುಮಾಡಿ ಔಷಧ ಕೊಡಬೇಕು.

ಇಂಥ ಸ್ತ್ರೀಯರ ವಿದ್ಯಾಭ್ಯಾಸಕ್ಕಾಗಿ ಪ್ರತ್ಯೇಕ ಶಾಲೆಗಳು ಸ್ಥಾಪಿತವಾದುವು. ಮಹಿಳೆಯರೇ ಉಪಾಧ್ಯಾಯರಾದರು. ಘೋಷಾ ಹೆಂಗಸರನ್ನು ಶಾಲೆಗೆ ಕರೆದೊಯ್ಯಲು ಗಾಡಿಗಳಾದವು ಆದರೆ ಮುಸ್ಲಿಂ ಶಾಲೆಗಳಿಗೇ ಪ್ರತ್ಯೇಕ ಮುಸ್ಲಿಂ ಇನ್ಸ್‌ಪೆಕ್ಟರುಗಳಿರಬೇಕೆಂಬ ಕೋರಿಕೆ ಬಂದಾಗ ಈ ಪ್ರತ್ಯೇಕತಾ ಭಾವನೆ ಅವರಿಗೆ ಸರಿ ಎನಿಸಲಿಲ್ಲ. ಮಹಮ್ಮದೀಯರು ಈ ಪ್ರತ್ಯೇಕತಾ ಭಾವನೆ ತೊರೆದು ಸುತ್ತಮುತ್ತಲ ಜನರೊಂದಿಗೆ ಸಂಪರ್ಕ, ಬಾಂಧವ್ಯ ಬೆಳೆಸಬೇಕೆಂದು ತಿಳಿಸಿದರು. ಅನೇಕ ಕಾಲದಿಂದ ಮುಸಲ್ಮಾನರು ನಮ್ಮ ದೇಶದವರೇ ಆದರೂ ದೇಶ ಭಾಷೆಯನ್ನು ಕಲಿಯದೆ ಹಿಂದೂಗಳಲ್ಲಿ ಮಿಳಿತ ರಾಗದೆ ಪ್ರತ್ಯೇಕ ಭಾವನೆಯಿಂದ ವರ್ತಿಸುತ್ತಿದ್ದುದನ್ನು ತೀವ್ರವಾಗಿ ಖಂಡಿ ಸಿದ್ದಾರೆ. ಈ ಪ್ರತ್ಯೇಕತಾ ಭಾವನೆಯಿಂದ ದೇಶದ ಭದ್ರತೆಗೇ ಹಾನಿ ಯಾದೀತು ಎಂದು ಹೇಳಿದ ಅವರ ಮಾತಿನ ಸತ್ಯವನ್ನು ಈಗ ನಾವು ಅನುಭವಿಸುತ್ತಿದೇವೆ. ೧೯೨೮ ರಲ್ಲಿ ಬೆಂಗಳೂರಿನಲ್ಲಿ ನಡೆದ ಹಿಂದೂ-ಮುಸ್ಲಿಂ ಗಲಭೆಯ ವಿಚಾರಣಾ ಸಮಿತಿಯ ಅಧ್ಯಕ್ಷರಾಗಿ ಅವರಿತ್ತ ದೀರ್ಘ ವರದಿಯಲ್ಲೂ ಇದೇ ಎಚ್ಚರಿಕೆ ಕೊಟ್ಟರು. ಈ ಪ್ರತ್ಯೇಕ ಭಾವನೆಯೇ ಭಾರತವು ಇಬ್ಭಾಗವಾಗಲು ಮೂಲಕಾರಣವಲ್ಲವೇ.

"ನಮ್ಮ ಧಾರ್ಮಿಕ ಗ್ರಂಥಗಳಲ್ಲಿ ಹೇಳಿರುವ ತತ್ವಗಳು ಬಹಳ ಅಮೌಲ್ಯವಾದುವು. ಆದರೆ ಅದರಲ್ಲಿ ಸೂಚಿತವಾಗಿರುವ ವಿಷಯಗಳು ಸಾವಿರಾರು ವರುಷಗಳ ಹಿಂದಿನ ಕಾಲದ ಪರಿಸ್ಥಿತಿಗೆ ಸರಿಹೋಗುವಂಥವು. ಭಾರತೀಯ ಯುವಕನನ್ನು ಆಧುನಿಕ ಕಾಲದ ಜೀವನ ಸಂಗ್ರಾಮಕ್ಕೆ ಅಣಿಮಾಡದೆ ಅವನನ್ನು ಸಾವಿರ ವರ್ಷಗಳ ಹಿಂದಕ್ಕೆ ಅವು ಒಯ್ಯುತ್ತವೆ." ಅವರು ಈ ಮಾತು ಆಡಿದ್ದು ೧೯೧೨ ರಲ್ಲಿ, ಬೆಂಗಳೂರು ಸೆಂಟ್ರಲ್ ಕಾಲೇಜಿನ ವಾರ್ಷಿಕೋತ್ಸವದಲ್ಲಿ. ಅನ್ಯ ದೇಶಗಳಲ್ಲಿರುವಂತೆ ಶಿಕ್ಷಣದಲ್ಲಿ ಎಲ್ಲರಿಗೂ ಸಮಾನಾವಕಾಶವಿರಬೇಕೆಂಬುದೇ ಅವರ ಉದ್ದೇಶ್ಯ. ಜಪಾನಿನ ಶಿಕ್ಷಣ ಕ್ರಮವು ಇವರ ಮೆಚ್ಚುಗೆಗೆ ಪಾತ್ರವಾಗಿತ್ತು ಅಲ್ಲಿ ವಿಶೇಷ ಗಮನ ನೈತಿಕ ಶಿಕ್ಷಣಕ್ಕೆ, ಧಾರ್ಮಿಕ ಶಿಕ್ಷಣಕ್ಕಲ್ಲ ಪ್ರತಿಯೊಬ್ಬ ವಿದ್ಯಾರ್ಥಿ ಯಲ್ಲಿಯೂ ನೈತಿಕ ನಿಷ್ಠೆ, ಕರ್ತವ್ಯಪಾಲನೆ, ರಾಷ್ಟ್ರಾಭಿಮಾನ, ಸೇವಾ ತತ್ಪರತೆ ಬೆಳೆಸಲು ಉಪಾಧ್ಯಾಯರು ಅಲ್ಲಿ ವಿಶೇಷ ಶ್ರಮವಹಿಸುತ್ತಾರೆ.

ಇದೇ ರೀತಿಯ ಶಿಕ್ಷಣವನ್ನು ಭಾರತದಲ್ಲೂ ರೂಢಿಗೆ ತರಬೇಕೆಂಬುದೇ ಅವರ ಆಶಯ. ಇದರಿಂದ ಸಮಾಜದ ಅನೇಕ ಲೋಪದೋಷಗಳನ್ನು ನಿವಾರಿಸಲು ಸುಲಭವಾದೀತು.

ಸಾರ್ವಜನಿಕ ಸಹಾಯ ಸಹಾನುಭೂತಿಯಿಲ್ಲದೆ ಸಮಾಜ ಸುಧಾರಣೆಯ ಯಾವ ಕೆಲಸವೂ ಸಾಧ್ಯವಾಗದೆಂಬುದನ್ನು ಇವರು ಚೆನ್ನಾಗಿ ಮನಗಂಡಿದ್ದರು. ಆದ್ದರಿಂದ ಸಮಯ ಸಿಕ್ಕಿದಾಗಲೆಲ್ಲಾ ನಿಸ್ಪೃಹತೆ, ಆತ್ಮಗೌರವ, ಸರಳ ಜೀವನ, ಉದಾರ ಮನಸ್ಸು, ವಿಶಾಲ ಹೃದಯ, ಕೆಲಸದಲ್ಲಿ ಚತುರತೆ ಮತ್ತು ಶ್ರದ್ಧೆ, ದೇಶಪ್ರೇಮ, ಶುಚಿತ್ವ, ಸಮಾನತೆ, ಎಲ್ಲಕ್ಕೂ ಮಿಗಿಲಾಗಿ ಸಹಕಾರ ಮನೋಭಾವ ಇವುಗಳನ್ನು ಬೆಳಸಿಕೊಂಡು ಬರುವಂತೆ ಬೋಧಿಸುವುದರಲ್ಲಿ ಅವರಿಗೆ ಬೇಸರವೇ ಇಲ್ಲ.

"ನಮಗೆ ಏಕಾಧಿಪತ್ಯ ರೂಢಿಯಾಗಿ ಹೋಗಿದೆ. ಹತ್ತೂ ಜನ ಸೇರಿ ಸಹಕರಿಸಿ ಕೆಲಸ ಮಾಡುವ ಗುಣ ಇಲ್ಲ ನಮ್ಮಲ್ಲಿ. ಅನ್ಯೋನ್ಯ ಸಹಕಾರ ಶೂನ್ಯ. ಸಂಘ, ಸಂಸ್ಥೆ, ಸಮಿತಿ ಏಕೋ ಬಾಳವು. ಸಂಸ್ಥೆಗಳಲ್ಲಿ ಒಬ್ಬರ ದೋಷವನ್ನೊಬ್ಬರು ಎತ್ತಿ ಹಾಕುವುದು, ವ್ಯಾಜ್ಯ, ವೈಮನಸ್ಯ ಇವು ಬೆಳೆಯುತ್ತಿವೆ. ಮಾತು ಭಾರಿ, ಕೆಲಸ ಕಡಮೆ" ಇವು ಹೋಗಬೇಕು ಎಂದು ಒತ್ತಿ ಒತ್ತಿ ಹೇಳುವರು. ಕಲೆತು ಕೆಲಸ ಮಾಡುವುದನ್ನು ಜನ ಕಲಿಯಲೆಂದು ಯಾವ ಕೆಲಸಕ್ಕಾದರೂ ಸಮಿತಿಗಳನ್ನು ಸ್ಥಾಪಿಸುವುದು ಅವರದೊಂದು ಕ್ರಮ—ಹುಚ್ಚು ಎಂದು ಬೇಕಾದರೂ ಹೇಳಿ. ಇವರ ಕಾಲದಲ್ಲಿ ಸ್ಥಾಪಿತವಾದ ಸಮಿತಿಗಳ ಪಟ್ಟಿಯೇ ಅನೇಕ ಪುಟಗಳಾದೀತು. ತನ್ನ ಸಹಾಯಕ್ಕೆಂದು ನೆಪ. ಆದರೆ ಸಮಿತಿಗಳಿಂದ ಇವರು ಸಹಾಯ ಪಡೆಯುತ್ತಿದ್ದರೋ, ಸಮಿತಿಗಳು ಇವರಿಂದ ಸಹಾಯ ಪಡೆಯುತ್ತಿದ್ದುವೋ ಹೇಳಬೇಕಾದ್ದಿಲ್ಲ. ಸಾಮೂಹಿಕವಾಗಿ ಕಲೆತು ಬೆರೆತು ಕೆಲಸ ಮಾಡಲಿ ಎಂಬ ಹಿರಿಯ ಆಸೆ.

ಅಂತ್ಯಜರ ಉದ್ಧಾರ, ಸಮಾಜ ಸುಧಾರಣೆ ಇವುಗಳಿಗೂ ಪ್ರತ್ಯೇಕ ಸಂಸ್ಥೆಗಳು. ಸಮಾಜ ಸುಧಾರಣೆಗಾಗಿಯೇ ೧೯೩೭ ರಲ್ಲಿ 'ಸಿವಿಕ್ ಅಂಡ್ ಸೋಷಿಯಲ್ ಪ್ರೋಗ್ರೆಸ್ ಅಸೋಸಿಯೇಷನ್' ಸ್ಥಾಪಿತವಾಯಿತು. ಈ

ಸಂಸ್ಥೆಯ ಪ್ರಾರಂಭೋತ್ಸವವನ್ನು ನಡೆಸುತ್ತಾ ಸಮಾಜದಲ್ಲಿರುವ ಲೋಪ ದೋಷಗಳನ್ನು ಎತ್ತಿ ಹಿಡಿದು ಅವುಗಳ ನಿವಾರಣೋಪಾಯಗಳನ್ನು ಸೂಚಿಸಿ ಮಾಡಿದ ಭಾಷಣದಿಂದ ಗ್ರಾಮಸ್ವೈರ್ಮಲ್ಯ, ಶುಚಿತ್ವ ಮತ್ತು ಸಮಾಜ ಸುಧಾರಣೆಯ ಬಗ್ಗೆ ಅವರ ತೀವ್ರ ಆಸಕ್ತಿ ವ್ಯಕ್ತವಾಗುತ್ತದೆ. ಅಸ್ಪೃಶ್ಯತೆ, ಬಾಲ್ಯ ವಿವಾಹ, ವರದಕ್ಷಿಣೆ, ಕುಡಿತ, ದುಂದು ವೆಚ್ಚ, ಅಶುಚಿ ಇವು ಇವರ ತೀವ್ರ ಖಂಡನೆಗೆ ಒಳಗಾಗಿವೆ. ಸಮಾಜ ಸುಧಾರಣೆಗಾಗಿ ಇವರಿತ್ತ ಸಲಹೆಗಳು ಗಮನಾರ್ಹವಾಗಿವೆ:—

೧ ಅಂತ್ಯಜರ ಉದ್ಧಾರ.

೨ ಮದುವೆ, ಮರಣ ಮತ್ತು ಇತರ ಶುಭಾಶುಭ ಕಾರ್ಯಗಳಲ್ಲಿ ದುಂದು ವೆಚ್ಚ ಮಾಡದಿರುವುದು.

೩ ಹೆಣ್ಣು ಮಕ್ಕಳ ವಿವಾಹ ವಯಸ್ಸನ್ನು ೧೪ ಕ್ಕೆ ಹೆಚ್ಚಿಸುವುದು. ಸ್ವಯಂ ಆರ್ಜನೆ ಮಾಡುವವರೆಗೆ ಪುರುಷರು ವಿವಾಹವಾಗ ಬಾರದೆಂದು ಗೊತ್ತುಮಾಡುವುದು; ಇದಕ್ಕಾಗಿ ಜನಾಭಿಪ್ರಾಯ ರೂಢಿಸುವುದು.

೪ ಎಲ್ಲ ಜಾತಿ ಪಂಗಡಗಳಲ್ಲೂ ಅನ್ಯೋನ್ಯತೆ, ಸ್ನೇಹಭಾವ ಬೆಳೆಸಲು ಪ್ರೋತ್ಸಾಹ.

೫ ದೇಶೀಯ ವ್ಯಾಯಾಮ ಪದ್ಧತಿಗೆ ಉತ್ತೇಜನ.

೬ ಕುಡಿತ ತಪ್ಪಿಸುವುದು.

೭ ಯೋಗ್ಯ ಸಮಾಜ ಸುಧಾರಣೆ ಕೈಗೊಳ್ಳಲು ತಕ್ಕ ವ್ಯವಸ್ಥೆ

ಬಾಲ್ಯ ವಿವಾಹ ಪದ್ಧತಿಯಿಂದ ಸಣ್ಣ ವಯಸ್ಸಿನಲ್ಲೇ ಸ್ತ್ರೀಯರು ಮಕ್ಕಳನ್ನು ಪಡೆಯುತ್ತಾರೆ. ಇದರಿಂದ ಶಿಶು ಮರಣ ಸಂಖ್ಯೆ ಹೆಚ್ಚುತ್ತದೆ ವಿಧವೆಯರ ಸಂಖ್ಯೆಯೂ ಬೆಳೆಯುತ್ತದೆ. ವಿಧವಾ ವಿವಾಹಕ್ಕೆ ಅಡಚಣೆ ಗಳನ್ನು ಕ್ರಮಶಃ ತಪ್ಪಿಸಬೇಕು. ಅದರಲ್ಲಿಯೂ ಚಿಕ್ಕ ವಯಸ್ಸಿನ ವಿಧವೆ ಯರನ್ನು ವಿರೂಪಗೊಳಿಸುವ ಕ್ರೂರ ಪದ್ಧತಿಯನ್ನು ಕೂಡಲೇ ನಿಲ್ಲಿಸ ತಪ್ಪ. ವರದಕ್ಷಿಣೆ ಪದ್ಧತಿ ಹೋಗಬೇಕು. ಬಹು ಹತ್ತಿರ ಸಂಬಂಧ

ಬೆಳೆಸುವುದನ್ನು ಕಡಿಮೆಮಾಡಿ ವೈವಾಹಿಕ ಕ್ಷೇತ್ರವನ್ನು ವಿಸ್ತರಿಸಬೇಕು ಹತ್ತಿರ ಸಂಬಂಧದ ವಿವಾಹದಿಂದ ಹುಟ್ಟುವ ಮಕ್ಕಳು ದೃಢಕಾಯರಾಗಿ ರುವುದಿಲ್ಲ. ಇದರಿಂದ ಕುಲ ಕ್ಷೀಣವಾಗುತ್ತಾ ಬರುತ್ತದೆ.

ಈಗ ದೇಶ ಬಹು ಮುಂದುವರಿದಿದೆ. ಈಗಿನ ದೃಷ್ಟಿಯಿಂದ, ಮೇಲ್ಕಂಡ ಸುಧಾರಣೆಗಳು ಅಷ್ಟು ಮಹತ್ವದ್ದಾಗಿ ಕಾಣದಿರಬಹುದು. ವಿಶ್ವೇಶ್ವರಯ್ಯನವರೇ ಹೇಳಿರುವಂತೆ ರೈಲು, ಜಹಜು, ಮೋಟಾರು, ವಿಮಾನ• ಮೊದಲಾದ ಸಂಚಾರ ಸೌಲಭ್ಯಗಳಿಂದ ಹೊಟೇಲು, ಸಿನಿಮಾ, ವಿದ್ಯಾಪ್ರಸಾರ, ಪಾಶ್ಚಿಮಾತ್ಯ ದೇಶಗಳ ಪ್ರಭಾವ ಇವುಗಳಿಂದ ಸಮಾಜ ಸುಧಾರಣೆ ಬಹು ಮುಂಬರಿದಿದೆ. ಆದರೆ ಈ ಸುಧಾರಣೆಯ ಮಹತ್ವ ಅರಿಯ ಬೇಕಾದರೆ, ಹಿಂದೆಯೇ ಹೇಳಿರುವಂತೆ ಆಗಿನ ಕಾಲದ ಪರಿಸ್ಥಿತಿ ಯನ್ನು ಗ್ರಹಿಸಬೇಕು. ಒಮ್ಮೆ ಬಾಯಾರಿದ ಅಂತ್ಯಜನೊಬ್ಬ ಸ್ನಾನ ಮಾಡಿ ಬರುತ್ತಿದ್ದ. ವಿಶ್ವೇಶ್ವರಯ್ಯನವರ ತಂದೆಯವರಿಂದ ಕುಡಿಯಲು ನೀರು ಬೇಡಿದ. ಅವರು ನೀರೆರೆದರು. ಇದೇ ಮಹಾಪರಾಧವಾಯಿತು. ಇದಕ್ಕಾಗಿ ಬಹಿಷ್ಕಾರ ವಿಧಿಸಬೇಕೆಂದು ಬ್ರಾಹ್ಮಣ ಸಮೂಹ ಬೊಬ್ಬೆಯಿಟ್ಟಿತು. ಆದರೆ ಶ್ರೀನಿವಾಸಶಾಸ್ತ್ರಿಗಳು ಅದಕ್ಕೆ ಬೆದರಲಿಲ್ಲ. ಕಾಲ ಅಂಥಾದ್ದು

ಕಾಲಕ್ಕೆ ತಕ್ಕಂತೆ ಅವರ ಅಭಿಪ್ರಾಯಗಳೂ ಮಾರ್ಪಟ್ಟಿವೆ. ಇಷ್ಟು ಸುಧಾರಣೆಗಳಿಂದ ಮಾತ್ರವೇ ವಿಶ್ವೇಶ್ವರಯ್ಯನವರು ಈಗ ಸಂತೃಪ್ತರಾಗರು. 'ಭಾರತದಲ್ಲಿ ಜನಬಾಹುಳ್ಯ ತೀವ್ರಗತಿಯಲ್ಲಿ ಬೆಳೆಯುತ್ತಿದೆ. ಇದರಿಂದ ಕ್ಷಾಮ ಭೀತಿ ಹೆಚ್ಚುತ್ತಿದೆ. ೧೯೪೩ ರಲ್ಲಿ ಕಲ್ಕತ್ತಾದಲ್ಲಿ ಹೊಟ್ಟೆಗಿಲ್ಲದೆ ಹುಳುಗಳಂತೆ ಜನ ಸತ್ತದ್ದನ್ನು ಮರೆಯಲಾಗದು. ಬಹು ಸಂಸಾರಿಗೆ ಸುಖ ದೊರೆಯದು. ಚಿಕ್ಕ ಸಂಸಾರದಲ್ಲಿ ಮಕ್ಕಳ ಬೆಳವಣಿಗೆ, ಪೋಷಣೆ, ಶಿಕ್ಷಣ ಇವಕ್ಕೆ ಹೆಚ್ಚು ಗಮನ ಕೊಡಲು ಸಾಧ್ಯ. ಪಾಶ್ಚಿಮಾತ್ಯದೇಶಗಳಲ್ಲಿ ಶಾಸ್ತ್ರೀಯ ಸಂತಾನ ನಿರೋಧಕ್ರಮ ವಿಶೇಷವಾಗಿ ಪ್ರಚಾರದಲ್ಲಿದೆ. ಸಂತಾನವನ್ನು ಮಿತಿಯಲ್ಲಿ ಡಲು 'ಮಿತಿಸಂತಾನ' ಸಂಸ್ಥೆಗಳನ್ನು ಸ್ಥಾಪಿಸಬೇಕು. ಒಂದು ಸಂಸಾರದಲ್ಲಿ ಇಬ್ಬರಿಗಿಂತ ಹೆಚ್ಚು ಮಕ್ಕಳನ್ನು ಪಡೆಯಬಾರದು. ದರಿದ್ರರಿಗೇ ಮಕ್ಕಳು ಹೆಚ್ಚು. ಆದ್ದರಿಂದ ಶಾಸ್ತ್ರೀಯ ಸಂತಾನ ನಿರೋಧ ಇವರಲ್ಲಿ ಹೆಚ್ಚು ಪ್ರಚಾರ

ವಾಗಬೇಕು. ಜರ್ಮನಿ, ರಷ್ಯಾ ದೇಶಗಳಲ್ಲಿರುವಂತೆ ಭಿಕ್ಷುಕರನ್ನು ಪ್ರತ್ಯೇಕ ಪ್ರದೇಶಗಳಲ್ಲಿಟ್ಟು, ವೃತ್ತಿ ಶಿಕ್ಷಣವಿತ್ತು ಸ್ವಯಂ ಆರ್ಜನೆ ಮಾಡುವಂತೆ ಬಲವಂತ ಪಡಿಸಬೇಕು. "ನನ್ನ ಆಯುಷ್ಯ ಪರಿಮಿತಿಯಲ್ಲೇ ಭಾರತದ ಜನ ಸಂಖ್ಯೆ ದ್ವಿಗುಣಿತವಾಗಿದೆ" ಎಂದು ಎಚ್ಚರಿಸುತ್ತಿದ್ದರು.

ಹಿಂದೂಗಳಿಗೆ ದೇವಾಲಯವೆಂದರೆ ಬಹಳ ಪವಿತ್ರ. ಹಿಂದೂಗಳಿಗೆ ಕಾಶಿ, ರಾಮೇಶ್ವರ, ತಿರುಪತಿ ಮೊದಲಾಗಿ ಕನ್ಯಾಕುಮಾರಿಯಿಂದ ಹರಿದ್ವಾರದವರೆಗೆ ಸಾವಿರಾರು ದೇವಾಲಯಗಳೂ, ಪುಣ್ಯಕ್ಷೇತ್ರಗಳೂ ಇವೆ. ಉತ್ಸವ ಕಾಲಗಳಲ್ಲಿ ಸಹಸ್ರಾರು ಜನ ಸ್ತ್ರೀ ಪುರುಷರು ಈ ಕ್ಷೇತ್ರಗಳಲ್ಲಿ ಸೇರುತ್ತಾರೆ. ನಮ್ಮ ಜನ ಸಾರ್ವಜನಿಕ ಆರೋಗ್ಯದ ಕಡೆ ಹೆಚ್ಚು ಗಮನ ಕೊಡದೆ, ಭಯಂಕರ ಅಂಟು ಜಾಡ್ಯಗಳು ತಲೆದೋರಿ ಹರಡಲು ಈ ಕ್ಷೇತ್ರಗಳು ಬಹಳ ಸಹಾಯಕವಾಗಿವೆ. ನದಿಯ ದಂಡೆಯಲ್ಲಿಯೇ ಮಲವಿಸರ್ಜನೆ ಮಾಡುವುದು, ಕಂಡಕಂಡಲ್ಲಿ ಉಗುಳುವುದು ಹೀಗಾಗಿ ಯಾತ್ರಾಸ್ಥಾನಗಳು ಕಾಯಿಲೆಯ ಕೂಪಗಳಾಗುತ್ತವೆ. ಅನೇಕ ರೋಗ ರುಜಿನಗಳಿಂದ ನರಳುವ ಭಿಕ್ಷುಕರೂ ಬಂದುಸೇರುತ್ತಾರೆ. ಚೀನಾ ಬಿಟ್ಟರೆ ಅಶುಚಿ, ಬಡತನ, ಪಟ್ಟದಾರಿದ್ರ್ಯ ಭರತಖಂಡದಲ್ಲಿರುವಂತೆ ಇನ್ನೆಲ್ಲಿಯೂ ಕಾಣದು.

ಒಮ್ಮೆ ಇವರು ಯಾತ್ರಾ ಸ್ಥಳವಾದ ನಂಜನಗೂಡಿಗೆ ಹೋಗಿದ್ದರು. ಅಲ್ಲಿನ ಪುರಸಭೆಯು ಇವರಿಗೆ ಮಾನ ಪತ್ರವನ್ನರ್ಪಿಸಿತು. ಈ ಮಾನ ಪತ್ರಕ್ಕೆ ಉತ್ತರ ಕೊಡುತ್ತಾ ನಂಜನಗೂಡಿನ ಅಶುಚಿ, ಅಸ್ವಚ್ಛತೆಯನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿದರು. ಗ್ರಾಮ ಸಾರವನ್ನು ಹೊಳೆಗೆ ಬಿಡುವುದರಿಂದಲೂ, ಜನರು ಹೊಳೆಯ ದಂಡೆಯಲ್ಲೇ ಮಲವಿಸರ್ಜನೆ ಮಾಡುವುದರಿಂದಲೂ ನದಿಯ ನೀರು ಕೆಡುತ್ತದೆ. ಈ ಕೆಟ್ಟ ನೀರನ್ನೇ ಕುಡಿಯುವುದಕ್ಕೆ ಜನರು ಬಳಸುತ್ತಾರೆ. ಕಾಯಿಲೆಯಲ್ಲದೆ ಇನ್ನೇನು ಬಂದೀತು ಇದರಿಂದ? ಹೊಳೆಯ ಪಕ್ಕದಲ್ಲೇ ಶೌಚಕ್ಕೆ ಕೂಡದಂತೆ ಮುಳ್ಳು ಬೇಲಿ ಹಾಕಿಸಬೇಕು; ಗ್ರಾಮಸಾರವನ್ನು ಹೊರಕ್ಕೆ ಸಾಗಿಸಬೇಕು; ಊರಿನಲ್ಲಿ ಸರಿಯಾದ ಮೋರಿಗಳನ್ನು ಮಾಡಿಸಬೇಕು; ಕುಡಿಯಲು ಶುದ್ಧವಾದ

ನೀರನ್ನೇ ಬಳಸಬೇಕೆಂದು ಆಗ್ರಹ ಪೂರ್ವಕ ಸೂಚಿಸಿದರು. ಯಾವ ಊರಿಗೇ ಹೋಗಲಿ ಗ್ರಾಮಕ್ಕೇ ಹೋಗಲಿ ಮೊದಲು ಒತ್ತಿ ಹೇಳುವುದು ಶುಚಿಯ ವಿಷಯ. ಲಕ್ಷಣವಾದ ಶುಭ್ರವಾದ ಉಡುಪನ್ನು ಹಾಕಿಕೊಳ್ಳಿ, ಮನೆಯನ್ನೂ ಅಂಗಳವನ್ನೂ ಬೀದಿಯನ್ನೂ ಶುಭ್ರವಾಗಿಡಿ ಎಂದು ಹೇಳುವುದರಲ್ಲಿ ಬೇಸರವಿಲ್ಲ ಅವರಿಗೆ. ಕನ್ನಂಬಾಡಿ ಕಟ್ಟೆ ಕಟ್ಟುವುದರಲ್ಲಿ ಎಷ್ಟು ಶ್ರದ್ಧೆಯೋ ಗ್ರಾಮ ನೈರ್ಮಲ್ಯದ ವಿಷಯದಲ್ಲೂ ಅಷ್ಟೇ ಶ್ರದ್ಧೆ ಅಷ್ಟೇ ಆಸಕ್ತಿ ಅದು ಹಿರಿದು, ಇದು ಕಿರಿದು ಎಂಬ ಭೇದ ಭಾವವಿಲ್ಲ.

ದೇವಾಲಯಗಳ ಶುಭ್ರತೆಯ ವಿಷಯವಾಗಿ ಅವರಿತ್ತಿರುವ ಸಲಹೆ ಎಷ್ಟು ಸಾಧುವಾದುದು. "ದೇವಾಲಯವನ್ನು ಪ್ರವೇಶಿಸುವ ಮೊದಲು ಪ್ರತಿಯೊಬ್ಬರೂ ನೀರಿನಿಂದ ಕಾಲು ತೊಳೆದುಕೊಳ್ಳಬೇಕು. ಶುಭ್ರವಾದ ಬಟ್ಟೆಯಿಂದ ಕಾಲೊರಸಿಕೊಂಡಮೇಲೆಯೇ ಒಳಕ್ಕೆ ಪ್ರವೇಶಿಸಬೇಕು. ದೇವಾಲಯದ ಒಳಭಾಗ ಕನ್ನಡಿಯಂತೆ ಶುಭ್ರವಾಗಿರಬೇಕು. ದೇವನಿರುವ ಮಂದಿರವಲ್ಲವೇ ಅದು? ತೆಂಗಿನನಾರು, ಕಾಯಿಚೂರು, ಬಾಳೇಹಣ್ಣಿನ ಸಿಪ್ಪೆ ಇವುಗಳನ್ನು ಸಿಕ್ಕಿದ ಕಡೆ ಎಸೆಯಬಾರದು. ಅವೆಲ್ಲವನ್ನೂ ಒಂದೆಡೆ ರಾಶಿಹಾಕಿ ಹೊರಕ್ಕೆ ಸಾಗಿಸಬೇಕು. ಈ ಸುಧಾರಣೆಗಳನ್ನು ರೂಢಿಗೆ ತರಲು ಸ್ವಲ್ಪ ತೊಂದರೆಯಾದೀತು ಆದರೆ ಕ್ರಮೇಣ ಸರಿಹೋಗುವುದರಲ್ಲಿ ಸಂದೇಹವಿಲ್ಲ."

ಜನರಲ್ಲಿ ಕೀಳು ಮೇಲು ಭಾವನೆಗಳು ದೂರವಾಗಿ ದಿನದಲ್ಲಿ ಸ್ವಲ್ಪ ಕಾಲವಾದರೂ ಸ್ನೇಹದಿಂದ ಸಮಭಾವದಿಂದ ಕೂಡಿ ಆಡಲು ಪೂನಾದಲ್ಲಿ 'ಡೆಕ್ಕನ್ ಕ್ಲಬ್', ಬೆಂಗಳೂರಿನಲ್ಲಿ 'ಸೆಂಚುರಿಕ್ಲಬ್' ಮತ್ತು 'ಲೇಡೀಸ್ ಕ್ಲಬ್' ಮೈಸೂರಿನಲ್ಲಿ 'ಕಾಸಮಾಪಾಲಿಟನ್ ಕ್ಲಬ್' ಇವುಗಳನ್ನು ಇವರು ಸ್ಥಾಪಿಸಿದ ವಿಷಯವನ್ನು ಹಿಂದೆಯೇ ತಿಳಿಸಲಾಗಿದೆ.

# ಆಡಳಿತನಿರ್ವಹಣೆ ಮತ್ತು ರಾಜಕೀಯ ಸುಧಾರಣೆ

"೧೯೦೨ ರಿಂದ ಇದುವರೆಗೆ ಈ ೨೧ ತಿಂಗಳು ಅನುಭವಿಸಿದಷ್ಟು ಮನಶ್ಶಾಂತಿ, ಸುಖಗಳನ್ನು ಯಾವ ಕಾಲದಲ್ಲೂ ನಾನು ಅನುಭವಿಸಿಲ್ಲ ಎಂದು ತಿಳಿಸಲು ನನಗೇನೂ ಸಂಕೋಚವಿಲ್ಲ ನಿಮ್ಮ ಕಾರ್ಯದಕ್ಷತೆಯೇ ಇದಕ್ಕೆ ಮುಖ್ಯ ಕಾರಣ" ಹೀಗೆಂದು ನಾಲ್ವಡಿ ಕೃಷ್ಣರಾಜ ಒಡೆಯರು ವಿಶ್ವೇಶ್ವರಯ್ಯನವರಿಗೆ ಜುಲೈ ೧೯೧೪ರಲ್ಲಿ ಬರೆದರು. ರಾಜ್ಯಾಡಳಿತದಲ್ಲಿ ಇವರ ಕಾರ್ಯದಕ್ಷತೆ, ನಿಸ್ಪೃಹತೆಗಳನ್ನು ವ್ಯಕ್ತಪಡಿಸಲು ಇದಕ್ಕೂ ಹೆಚ್ಚಿನ ಪ್ರಶಂಸೆ ಬೇಕೆ?

ಮೈಸೂರು ೧೮೮೧ರವರೆಗೆ ೫೦ ವರ್ಷಕಾಲ ಬ್ರಿಟಿಷರ ಆಳ್ವಿಕೆಯಲ್ಲಿಯೇ ಇದ್ದಿತು. ತದನಂತರ ರಾಜ್ಯಾಡಳಿತವನ್ನು ಬ್ರಿಟಿಷರು ಚಾಮರಾಜೇಂದ್ರ ಒಡೆಯರಿಗೆ ಒಪ್ಪಿಸಿದರು. ಆಗಿಂದ ಬಹು ದಕ್ಷರಾದ ದಿವಾನರ ಸಹಾಯದಿಂದ ನೆರೆಹೊರೆಯ ಬ್ರಿಟಿಷ್ ಪ್ರಾಂತಗಳಿಗೆ ಯಾವರೀತಿಯಲ್ಲೂ ಕಡಮೆಯಿಲ್ಲದಂತೆ ಮೈಸೂರು ಪ್ರಗತಿ ಪಥದಲ್ಲಿ ಅಡಿಯಿಡುತ್ತಾ ಮುಂಬರಿಯುತ್ತಾ ಬಂದಿದೆ. ಬ್ರಿಟಿಷರಿಂದ ರಾಜ್ಯ ಅರಸರ ಆಳ್ವಿಕೆಗೆ ಬಂದ ಪ್ರಾರಂಭದಲ್ಲಿಯೇ ದಿವಾನ್ ರಂಗಾಚಾರ್ಲು ಅವರು ಪ್ರಜೆಗಳ ಸಹಕಾರದಿಂದ ರಾಜ್ಯಾಡಳಿತ ನಡೆಸಿಕೊಂಡು ಬರಲು ಪ್ರಜಾಪ್ರತಿನಿಧಿ ಸಭೆಯನ್ನು ಸ್ಥಾಪಿಸಿದರು ದಿವಾನ್ ವಿ. ಪಿ. ಮಾಧವರಾಯರು ೧೯೦೭ರಲ್ಲಿ ನ್ಯಾಯವಿಧಾಯಕ ಸಭೆಯನ್ನು ಸ್ಥಾಪಿಸಿದರು. ಮೈಸೂರಿನ ರಾಜ್ಯಾಡಳಿತವು ಎಷ್ಟೇ ದಕ್ಷತೆಯಿಂದ ನಡೆಯುತ್ತಿದ್ದರೂ ಬ್ರಿಟಿಷ್ ರೆಸಿಡೆಂಟರ ಅಧೀನದಲ್ಲಿದ್ದ ಮೈಸೂರಿಗೆ ಬ್ರಿಟಿಷರ ರಾಜ್ಯವ್ಯವಸ್ಥೆಯಲ್ಲಿ ಒಂದು ಗೌರವ ಸ್ಥಾನ, ಯೋಗ್ಯ ಮನ್ನಣೆ ದೊರೆಯುತ್ತಿರಲಿಲ್ಲ. ಇದು ಮೈಸೂರು ಅರಸರಿಗೂ, ಪ್ರಜೆಗಳಿಗೂ ವ್ಯಥೆಗೆ ಕಾರಣವಾಗಿತ್ತು. ಸಮಾನತೆಯಿಲ್ಲದ ಈ ಕೀಳು ಭಾವನೆ ಸರಿಹೋಗುತ್ತಿರಲಿಲ್ಲ. ತಮ್ಮ ಸಂಸ್ಥಾನದಲ್ಲಿ ತಾವು ಸ್ವತಂತ್ರರಾಗಿ ಗೌರವದಿಂದ ರಾಜ್ಯಾಡಳಿತ ನಡೆಸಿಕೊಂಡು ಬರಲು ಶ್ರೀಮನ್ಮಹಾರಾಜರು ತವಕಪಡುತ್ತಿದ್ದರು. ದತ್ತಿ ಅಥವಾ ದಾನಶಾಸನ

ರೂಪವಾದ ಹಳೆಯ ಕರಾರು ಪತ್ರವನ್ನು (Instrument of Accession) ಮಾರ್ಪಡಿಸಿ ಬ್ರಿಟಿಷ್ ಪ್ರಭುತ್ವದೊಡನೆ ಗೌರವಯುತ ಒಪ್ಪಂದ (Treaty) ಮಾಡಿಕೊಳ್ಳಲು ಪ್ರಯತ್ನಗಳು ನಡೆಯುತ್ತಲೇ ಇದ್ದವು. ಬ್ರಿಟಿಷ್ ಪ್ರಭುತ್ವದ ಕಾರ್ಯದರ್ಶಿಗಳಾದ ಮಾಂಟಗ್ಯು ಅವರು ೧೯೧೩ರಲ್ಲಿ ಮೈಸೂರಿಗೆ ಭೇಟಿಯಿತ್ತಾಗ ಈ ವಿಷಯವಾಗಿ ಸಮಾಲೋಚನೆ ನಡೆಯಿತು. ಅದೇ ವರ್ಷದಲ್ಲಿ ವೈಸರಾಯ್ ಲಾರ್ಡ್ ಹಾರ್ಡಿಂಜ್ ಅವರು ಮೈಸೂರಿಗೆ ದಯಮಾಡಿಸಿದರು. ಈ ಸುಸಮಯವನ್ನು ಬಳಸಿಕೊಂಡು ಉಭಯತ್ರರ ಒಡಂಬಡಿಕೆಯಿಂದ ಬ್ರಿಟಿಷರಿಗೂ, ಮೈಸೂರಿಗೂ 'ಒಪ್ಪಂದ' ಅಥವಾ ಕೌಲು ಆಗಬೇಕೆಂದು ವಿಶ್ವೇಶ್ವರಯ್ಯನವರು ಒತ್ತಾಯಪಡಿಸಿದರು. ಉನ್ನತ ಮಟ್ಟದಲ್ಲಿದ್ದ ಮೈಸೂರಿನ ಆಡಳಿತದಿಂದ ಸಂತುಷ್ಟರಾದ ಬ್ರಿಟಿಷ್ ಪ್ರಭುತ್ವವೂ ಸಮ್ಮತಿಸಿತು. ಶ್ರೀಮನ್ಮಹಾರಾಜರ ವ್ಯಕ್ತಿತ್ವ, ಕೀರ್ತಿ, ವಿಶ್ವೇಶ್ವರಯ್ಯನವರ ದಕ್ಷತೆ, ನಿಸ್ಪೃಹತೆ, ಪ್ರತಿಭೆಗಳಿಂದ ಬ್ರಿಟಿಷ್ ಪ್ರಭುತ್ವಕ್ಕೂ ಮೈಸೂರಿಗೂ ಗೌರವಯುತ ಒಪ್ಪಂದವಾಯಿತು. ವಿಶ್ವೇಶ್ವರಯ್ಯನವರ ಸಾಹಸದಿಂದ ಬೆಂಗಳೂರು ದಂಡಿನ ಉಳಿತಾಯದ ಹಣ ಮೈಸೂರಿಗೆ ದೊರೆಯುವಂತೆಯೂ ಆಯಿತು.

ರಾಜ್ಯಾಡಳಿತದಲ್ಲಿ ಪ್ರಜೆಗಳ ಸಹಕಾರವನ್ನು ಹೆಚ್ಚು ಹೆಚ್ಚಾಗಿ ಪಡೆಯಬೇಕೆಂಬುದು ಮೊದಲಿನಿಂದಲೂ ವಿಶ್ವೇಶ್ವರಯ್ಯನವರ ಆಶಯ. ರಂಗಾಚಾರ್ಲು ಅವರಿಂದ ಸ್ಥಾಪಿತವಾದ ಪ್ರಜಾಪ್ರತಿನಿಧಿಸಭೆ ಕೇವಲ "ಅರಿಕೆ" ಮಾಡಿಕೊಳ್ಳುವ ಸಭೆಯಾಗಿದ್ದಿತು. ಸರ್ಕಾರದಿಂದ ನೇಮಕವಾದ ಪ್ರತಿನಿಧಿಗಳು ದಸರಾ ಕಾಲದಲ್ಲಿ ವರ್ಷಕ್ಕೊಮ್ಮೆ ಮೈಸೂರಿಗೆ ಬಂದು ಪ್ರಜೆಗಳ ಕಷ್ಟಸಂಕಟಗಳನ್ನು ಸಭೆಯಲ್ಲಿ ನಿವೇದಿಸಿಕೊಳ್ಳುತ್ತಿದ್ದರು. ಪ್ರಾರಂಭದಲ್ಲಿ ಇದು ಸರ್ಕಾರವನ್ನು ಪ್ರಶಂಸಿಸುವ, ಕೇವಲ ಹೊಗಳುಭಟ್ಟರ ಸಭೆಯಾಗಿತ್ತು. ಸಭೆಗೆ ಬಂದ ಪ್ರತಿನಿಧಿಗಳಿಗೆ ಮೃಷ್ಟಾನ್ನ ಭೋಜನ, ಶಾಲು ಜೋಡಿ, ಚಿನ್ನದ ಮೊಹರು ಬಹುಮಾನವಾಗಿ ದೊರೆಯುತ್ತಿತ್ತು. ಕಾಲಕ್ರಮೇಣ ಇದು ಬದಲಾಯಿಸುತ್ತಾ ಬಂತು. ಆದರೂ ರಾಜ್ಯ ವ್ಯವಸ್ಥೆಯಲ್ಲಿ ಭಾಗವಹಿಸಲು ಪ್ರತಿನಿಧಿಗಳಿಗೆ ಸಾಕಷ್ಟು ಅವಕಾಶ ದೊರೆಯುತ್ತಿರಲಿಲ್ಲ. ವಿಶ್ವೇಶ್ವರಯ್ಯನವರು ಇದೆಲ್ಲವನ್ನೂ ಮಾರ್ಪಡಿಸಿ ಸಭೆಯನ್ನು

ನಿಜವಾದ ರಾಜಕೀಯ ಅಧಿಕಾರವಾಣಿಯುಳ್ಳ ಸಭೆಯಾಗಿ ಮಾಡಿದರು. ಪ್ರತಿನಿಧಿಗಳನ್ನು ಆರಿಸುವ ಹಕ್ಕು ಪ್ರಜೆಗಳಿಗೆ ದೊರೆಯಿತು. ಹೀಗೆ ಚುನಾಯಿತರಾದ ಪ್ರತಿನಿಧಿಗಳು ಸರ್ಕಾರದ ಆಡಳಿತದ ವಿಚಾರದಲ್ಲಿ ಪ್ರಶ್ನೋತ್ತರಗಳನ್ನು ಕೇಳುವುದಕ್ಕೂ, ಶಿಫಾರಸುಗಳನ್ನು ಮಾಡುವುದಕ್ಕೂ ಅಧಿಕಾರ ಪಡೆದರು. ರಾಜ್ಯದ ಆದಾಯ-ವ್ಯಯವನ್ನು ವಿಮರ್ಶಿಸುವ ಅಧಿಕಾರವನ್ನೂ ಸಭೆ ಪಡೆಯಿತು. ಇದುವರೆಗೆ ಆಂಗ್ಲ ಭಾಷೆಯಲ್ಲಿ ಅಚ್ಚಾಗುತ್ತಿದ್ದ ಆದಾಯ-ವ್ಯಯ ಪಟ್ಟಿಯು ಮೊಟ್ಟಮೊದಲು ಕನ್ನಡದಲ್ಲಿ ಮುದ್ರಿತವಾಗತೊಡಗಿತು. ಆದಾಯ ವ್ಯಯದ ಅಂದಾಜು ಪಟ್ಟಿಯನ್ನು ಪರಿಷ್ಕರಿಸಲು ಸಾಕಷ್ಟು ಅವಕಾಶ ದೊರೆಯಲೆಂದು ಸಭೆಯು ವರ್ಷಕ್ಕೆ ಎರಡಾವರ್ತಿ ಸೇರುವಂತಾಯಿತು. ಇಂಥ "ಬಡ್ಜೆಟ್" ಅಧಿವೇಶನವು ಮೊಟ್ಟಮೊದಲು ಏಪ್ರಿಲ್ ೧೯೧೭ರಲ್ಲಿ ಸೇರಿತು. ಪ್ರಜಾಪ್ರತಿನಿಧಿ ಸಭೆಯಿಂದ ನ್ಯಾಯವಿಧಾಯಕ ಸಭೆಗೆ ಹೆಚ್ಚು ಪ್ರತಿನಿಧಿಗಳನ್ನು ಆರಿಸುವ ಹಕ್ಕು ದೊರೆಯಿತು ಪ್ರತಿನಿಧಿಗಳು ಮೈಸೂರಿಗೆ ಬಂದಾಗ ಇಳಿದುಕೊಳ್ಳಲು ಪ್ರತ್ಯೇಕ ವ್ಯವಸ್ಥೆಯನ್ನೂ ಮಾಡಲಾಯಿತು. ಪ್ರತಿನಿಧಿಗಳೂ ಮೊದಲಿಗಿಂತಲೂ ನಿರ್ಭಯ, ನಿರ್ದಾಕ್ಷಿಣ್ಯಗಳಿಂದ ಸರ್ಕಾರವನ್ನು ಟೀಕಿಸತೊಡಗಿದರು ಈ ಟೀಕೆಗಳನ್ನು ಹರ್ಷಚಿತ್ತದಿಂದ ಸಭಾಧ್ಯಕ್ಷರಾದ ದಿವಾನ್ ವಿಶ್ವೇಶ್ವರಯ್ಯನವರು ಸ್ವಾಗತಿಸಿ ಪ್ರಜೆಗಳ ಕ್ಷೇಮಾಭ್ಯುದಯಕ್ಕೆ ಕೈಲಾದ ಪ್ರಯತ್ನ ಮಾಡುತ್ತಿದ್ದರು. ಸರ್ಕಾರದ ಆಡಳಿತವನ್ನೂ, ದಿವಾನರನ್ನೂ ಎಷ್ಟೇ ಕಟುವಾಗಿ ಟೀಕಿಸಿದರೂ ವಿಶ್ವೇಶ್ವರಯ್ಯನವರು ಸ್ಥೈರಣೆಯಿಂದಲೂ, ನಗೆಮೊಗದಿಂದಲೂ ಎಲ್ಲವನ್ನೂ ಸ್ವಾಗತಿಸುತ್ತಿದ್ದರು. ನಿರ್ಭಯವಾದ ಟೀಕೆ ಪ್ರಜಾಪ್ರಭುತ್ವದ ಜೀವಾಳ ಎಂದವರು ಚೆನ್ನಾಗಿ ಅರಿತಿದ್ದರು. ಕಳಂಕರಹಿತ ಟೀಕೆಯನ್ನು ಪ್ರೋತ್ಸಾಹಿಸುತ್ತಿದ್ದರು ಸರ್ಕಾರದಿಂದ ಜನಕ್ಕಾಗುತ್ತಿರುವ ಉಪಕಾರಗಳನ್ನು ತಿಳಿಸುವುದಕ್ಕಾಗಿಯೂ ಜನರ ಕಷ್ಟ ಸುಖಗಳನ್ನು ಸಾರ್ವಜನಿಕರ ಗಮನಕ್ಕೆ ತರುವುದಕ್ಕಾಗಿಯೂ ವೃತ್ತಪತ್ರಿಕೆಗಳ ಸ್ಥಾಪನೆಯನ್ನು ಪ್ರೋತ್ಸಾಹಿಸಿದರು. ಜಿಲ್ಲೆಗೊಂದು ಪತ್ರಿಕೆಯಾಗಬೇಕೆಂದು ಅವರ ಅಭಿಲಾಷೆ. ಸಂಪದಭಿವೃದ್ಧಿ ಸಮಾಜದ ಕಾರ್ಯಕಲಾಪಗಳನ್ನು ತಿಳಿಸುವುದಕ್ಕೆ "ಅರ್ಥಸಾಧಕ ಪತ್ರಿಕೆ" ಕನ್ನಡ ಮತ್ತು ಆಂಗ್ಲ ಭಾಷೆಗಳಲ್ಲಿ ಸರ್ಕಾರದ ವತಿಯಿಂದ ಪ್ರಕಟವಾಗು

ತ್ತಿತ್ತು. ಇದಲ್ಲದೆ "ಬ್ಲೂ ಬುಕ್ ಜರ್ನಲ್" ಎಂಬ ಮಾಸಿಕವು ಸರ್ಕಾರದ ಕಾರ್ಯಗಳನ್ನು ಜನರಿಗೆ ತಿಳಿಸಲು ಪ್ರಕಟವಾಗುತ್ತಿತ್ತು.

ಪ್ರಜಾಪ್ರತಿನಿಧಿ ಸಭೆಯ ಅಧಿಕಾರ ಹೆಚ್ಚಿದಂತೆಯೇ ನ್ಯಾಯವಿಧಾಯಕ ಸಭೆಯ ಅಧಿಕಾರವೂ ಹೆಚ್ಚಿತು. ಚುನಾಯಿತ ಸದಸ್ಯರ ಸಂಖ್ಯೆಯೂ ಅವರ ಅಧಿಕಾರಗಳೂ ಹೆಚ್ಚಿಸಲ್ಪಟ್ಟವು. ಮತದಾರರ ಕನಿಷ್ಠ ಅರ್ಹತೆಯನ್ನು ತಗ್ಗಿಸಿ ಮತದಾರರ ಸಂಖ್ಯೆ ಹೆಚ್ಚಲು ಅವಕಾಶ ಕೊಡಲಾಯಿತು.

ವಿಶ್ವೇಶ್ವರಯ್ಯನವರು ಕೃಷ್ಣರಾಜಸಾಗರ, ಭದ್ರಾವತಿ ಕಬ್ಬಿಣ ಕಾರ್ಖಾನೆ, ಗಂಧದ ಎಣ್ಣೆ ಕಾರ್ಖಾನೆ, ಸಾಬೂನು ಕಾರ್ಖಾನೆ, ವಿಶ್ವವಿದ್ಯಾನಿಲಯ ಮೊದಲಾದ ದೊಡ್ಡ ದೊಡ್ಡ ಯೋಜನೆಗಳನ್ನು ರೂಪಿಸಲು ಪ್ರಯತ್ನಿಸುತ್ತಿದ್ದರು. ಇದಕ್ಕೆ ಬೇಕಾದ ಅಂದಾಜು ಪಟ್ಟಿಯನ್ನು ಸಿದ್ಧಪಡಿಸಿ ಪ್ರಜಾಪ್ರತಿನಿಧಿಗಳ ಒಪ್ಪಿಗೆಗೆ ಇಡುತ್ತಿದ್ದರು. ಇವರು ವಿಪರೀತ ಹಣ ವೆಚ್ಚ ಮಾಡುತ್ತಾರೆ, ಹಣ ಎಲ್ಲಿಂದ ತರುವುದು ಎಂದು ಪ್ರತಿನಿಧಿಗಳಿಗೆ ಕಳವಳ. ಪ್ರಜಾಪ್ರತಿನಿಧಿ ಸಭೆ, ನ್ಯಾಯವಿಧಾಯಕ ಸಭೆಗಳಲ್ಲಿ ಹಲವರು ಈ ದುಂದು ವೆಚ್ಚವನ್ನು ಕಟುವಾಗಿ ಟೀಕಿಸಿದರು. "ಆದಾಯ—ವ್ಯಯ ದೇಶದ ಆರ್ಥಿಕ ಪ್ರಗತಿಯ ಸೂಚಕ. ವ್ಯಯ ಹೆಚ್ಚಿದಷ್ಟೂ ಆದಾಯವೂ ಹೆಚ್ಚುತ್ತದೆ. ಹೆಚ್ಚಿನ ವ್ಯಯ ಎಂದರೆ ಹೆಚ್ಚಿನ ಚಟುವಟಿಕೆ, ಹೆಚ್ಚಿನ ಉತ್ಪಾದನೆ, ಹೆಚ್ಚು ಸಂಪಾದನೆ. ದೇಶದ ಆರ್ಥಿಕೋನ್ನತಿಗಾಗಿ ಮಾಡುವ ಖರ್ಚು ದುಂದು ವೆಚ್ಚವಲ್ಲ. ಇಂದಿಲ್ಲ ನಾಳೆ ಪ್ರಜೆಗಳು ಅದರಿಂದ ಪ್ರಯೋಜನ ಪಡೆಯುವುದು ಖಂಡಿತ. ವೆಚ್ಚವನ್ನು ಎಚ್ಚರಿಕೆಯಿಂದ ಪರಾಂಬರಿಸುವ ಸರಕಾರ, ಅದರ ಪ್ರಯೋಜನ ಪಡೆವ ಬುದ್ಧಿವಂತ ಜನ ಇರುವುದರಿಂದ ಹೆಚ್ಚು ವೆಚ್ಚ ಮಾಡಲು ಸರಕಾರ ಹೆದರುತ್ತಿಲ್ಲ" ಎಂದು ವಿಶ್ವೇಶ್ವರಯ್ಯನವರು ದಿಟ್ಟತನದಿಂದ ಉತ್ತರವಿತ್ತರು. ದೇಶದ ಕಲ್ಯಾಣಕ್ಕಾಗಿಯೇ ಪ್ರತಿಯೊಂದು ಕಾಸೂ ವೆಚ್ಚವಾಗುತ್ತಿದೆ ಎಂಬ ಧೈರ್ಯವಿದ್ದುದರಿಂದ ಅವರಿಗೆ ಈ ದಿಟ್ಟತನ. ಈ ದಿಟ್ಟತನವೇ ವರಮಾನ ತೆರಿಗೆಯನ್ನು ಮೈಸೂರಲ್ಲಿ ಜಾರಿಗೆ ತರಲು ಅವರಿಗೆ ಧೈರ್ಯ ಕೊಟ್ಟಿತು.

ಆದರೆ ಎಂಟು ವರ್ಷಗಳ ಅವರ ಅವಧಿಯಲ್ಲಿ ಆದಾಯಕ್ಕಿಂತ ಹೆಚ್ಚು ವ್ಯಯ ಯಾವ ವರ್ಷದಲ್ಲಿಯೂ ಆಗಲಿಲ್ಲ. ಆದರೆ ಜನರಲ್ಲಿ ಮಾತ್ರ

ವಿಶ್ವೇಶ್ವರಯ್ಯನವರು ಬೊಕ್ಕಸವನ್ನೇ ಬರಿದು ಮಾಡಿಬಿಡುತ್ತಾರೆಂಬ ಜೊಬ್ಬೆ ತಪ್ಪಲಿಲ್ಲ. ಜನರಲ್ಲಿ ಹಬ್ಬಿದ್ದ ಈ ತಪ್ಪು ಅಭಿಪ್ರಾಯ ಹೋಗಲಾಡಿಸಲು ನಿವೃತ್ತರಾದ ಹತ್ತು ವರ್ಷಗಳ ತರುವಾಯ ಅವರೊಂದು ವಿಶೇಷ ಪ್ರಕಟನೆ ಹೊರಡಿಸಿದರು. ೧೯೧೧-೧೨ ರಲ್ಲಿ ಮೈಸೂರು ದಿವಾನಗಿರಿ ಸೂತ್ರ ವಹಿಸಿದ್ದಾಗ ಸಂಸ್ಥಾನದ ಆದಾಯ ರೂ. ೨೩೧ ಲಕ್ಷವಿದ್ದು, ಇವರು ನಿವೃತ್ತರಾಗುವ ವೇಳೆಗೆ ರೂ ೩೧೦ ಲಕ್ಷಕ್ಕೆ ಏರಿತ್ತು. ಸಂಸ್ಥಾನದ ಆಸ್ತಿ ರೂ. ೧,೯೪ ಲಕ್ಷ ಮತ್ತು ಜವಾಬ್ದಾರಿ ರೂ. ೫೬೦ ಲಕ್ಷ ಆಗಿತ್ತು. ಇವರ ಅವಧಿಯಲ್ಲಿ ರಾಷ್ಟ್ರೋನ್ನತಿಯ ಕಾರ್ಯಗಳಿಗಾಗಿ ಇಡು ಬಂಡವಾಳದ ರೂಪದಲ್ಲಿ ಆದ ವೆಚ್ಚ ರೂ. ೩೩೨ ಲಕ್ಷ. ಆದರೆ ಪ್ರತಿಫಲ ಆಗಲೇ ಕಂಡು ಬರಲಿಲ್ಲ. ತೆಂಗಿನ ಮರದಂತೆ ಈಗ ಕಾಣಬರುತ್ತಿದೆ. ಮೈಸೂರು ಸಂಸ್ಥಾನದ ಆದಾಯ ೧೯೪೮-೪೯ರಲ್ಲಿ ರೂ ೧೧ ಕೋಟಿ ೮೪ ಲಕ್ಷವಾಯಿತು.

ಸರಕಾರಿ ಕೆಲಸಗಳು ಚೆನ್ನಾಗಿ ವಿಚಕ್ಷಣೆಯಿಂದ ನಡೆಯಲು ದಕ್ಷರಾದವರನ್ನೇ ಆರಿಸಿಕೊಳ್ಳಬೇಕೆಂದು ವಿಶ್ವೇಶ್ವರಯ್ಯನವರ ಅಭಿಲಾಷೆ. ತರುಣರಿಗೆ ಪ್ರೋತ್ಸಾಹ ಹೆಚ್ಚು. ಪಾಶ್ಚಿಮಾತ್ಯ ಪದವಿಗಳನ್ನು ಪಡೆದವರಿಗೆ ವಿಶೇಷ ಮನ್ನಣೆ. ಶುಭ್ರವಾದ ವಸ್ತ್ರ ಧರಿಸಿಕೊಂಡು ಬಂದವರಲ್ಲಿ ಪ್ರೀತಿ. ಕ್ರಮವರಿತು ಕಾಲಕ್ಕೆ ಸರಿಯಾಗಿ ಕೆಲಸ ಮಾಡುವವರಲ್ಲಿ ಗೌರವ.

ಯೋಗ್ಯ ತರುಣರನ್ನು ಆಕರ್ಷಿಸುವ ಸಲುವಾಗಿ ಮೈಸೂರು ಸಿವಿಲ್ ಸರ್ವಿಸ್ ಪರೀಕ್ಷೆಯ ನಿಯಮಗಳನ್ನೇ ತಿದ್ದುಪಡಿ ಮಾಡಲಾಯಿತು. ಸರ್ಕಾರಿ ಕೆಲಸದಲ್ಲಿ ನಿಯಮಾನುಸಾರ ಕಾಲಕ್ರಮವಾಗಿ, ಎಲ್ಲರಿಗೂ ಬಡ್ತಿ ದೊರೆಯುತ್ತಾ ಹೋಗುತ್ತದೆಯಷ್ಟೆ. ಇದರಲ್ಲಿ ಯೋಗ್ಯತೆಯ ಪರೀಕ್ಷೆಯಿಲ್ಲ. ಇದರಲ್ಲಿ ಅರ್ಹತೆಯಿಲ್ಲದವರೂ ಮೇಲಕ್ಕೆ ಏರುತ್ತಲೇಯಿರುತ್ತಾರೆ. ಆದರೆ ಅನೇಕ ಪ್ರತಿಭಾವಂತರು ಕೆಳ ದರ್ಜೆಯಲ್ಲಿಯೇ ಕೊಳೆಯಬೇಕಾಗುತ್ತದೆ. ಇಂಥಾ ಪ್ರತಿಭಾವಂತರಿಗೆ ಅವಕಾಶ ಕಲ್ಪಿಸಿಕೊಡಲು ಆವಶ್ಯ ಬಿದ್ದಾಗ ಯೋಗ್ಯತಾ ಪರೀಕ್ಷೆ ನಡೆಸುವ ಪದ್ಧತಿಗೆ ಹೆಚ್ಚು ಪ್ರಾಶಸ್ತ್ಯ ಕೊಟ್ಟು ಅದನ್ನು ಕ್ರಮಪಡಿಸಿದರು. ಯೋಗ್ಯರಾದ ಪ್ರತಿಭಾನ್ವಿತ ತರುಣ ಕೆಳದರ್ಜೆಯ ಅಧಿಕಾರಿಗಳ ಹೆಸರನ್ನು ಆಯಾ ಇಲಾಖೆಗಳ ಮೇಲಧಿಕಾರಿಗಳು ಶಿಫಾರಸು

ಮಾಡಿ ಕಳುಹಿಸುವಂತೆ ಒಮ್ಮೆ ಎಲ್ಲ ಅಧಿಕಾರಿಗಳಿಗೂ ತಿಳಿಸಲಾಯಿತು. ಎಲ್ಲ ಇಲಾಖಾ ಮುಖ್ಯಾಧಿಕಾರಿಗಳೂ ಯೋಗ್ಯತೆಗೆ ಪ್ರಾಶಸ್ತ್ಯ ಕೊಡದೆ ತಮಗೆ ಬೇಕಾದವರ ಹೆಸರುಗಳನ್ನು ಪಟ್ಟಿಮಾಡಿ ಸರಕಾರಕ್ಕೆ ಕಳುಹಿಸಿ ಕೊಟ್ಟರು. ಮಂತ್ರಿ ಮಂಡಲದ ಒಪ್ಪಿಗೆಯನ್ನೂ ಆ ಪಟ್ಟಿ ಪಡೆಯಿತು. "ದಿವಾನರ ಸಹಿಯೂ ಬಿತ್ತು. ಶ್ರೀಮನ್ಮಹಾರಾಜರವರ ಕೊನೆಯ ಒಪ್ಪಿಗೆಗೆ ಹೋಗ ಬೇಕು. ಹಾಗೆ ಕಳುಹಿಸುವುದಕ್ಕೆ ಮೊದಲು ತಮ್ಮ ಖಾಸಗೀ ಕಾರ್ಯ ದರ್ಶಿಯವರನ್ನು ಕರೆಸಿ ಪಟ್ಟಿ ಸಮಾಧಾನಕರವಾಗಿದೆಯೇ ಎಂದು ಕೇಳಿ ದರು. ಈ ವಿಷಯದಲ್ಲಿ ವಿಶ್ವೇಶ್ವರಯ್ಯನವರಿಗೂ ಅವರ ಕಾರ್ಯದರ್ಶಿ ಗಳಿಗೂ ಮೊದಲೇ ಅನೇಕಾವರ್ತಿ ಮಾತುಕತೆಗಳು ನಡೆದಿದ್ದುವು. ಕಾರ್ಯ ದರ್ಶಿಗಳಿಗೆ ಪಟ್ಟಿಯ ಒಳಮರ್ಮ ಚೆನ್ನಾಗಿ ತಿಳಿದಿತ್ತು. ಯೋಗ್ಯರೂ ದಕ್ಷರೂ ಆದ ಹಲವು ಪದವೀಧರ ತರುಣ ಅಧಿಕಾರಿಗಳ ಹೆಸರುಗಳನ್ನು ಆ ಪಟ್ಟಿಯಲ್ಲಿ ಸೇರಿಸಿಯೇ ಇರಲಿಲ್ಲ ಅದಕ್ಕೆ ಹೊಸಬರನ್ನು ಸೇರಿಸಿ ಯೋಗ್ಯತಾನುಸಾರ ನಿರ್ದಾಕ್ಷಿಣ್ಯವಾಗಿ ಪಟ್ಟಿಯನ್ನು ಸರಿಮಾಡಿ ಕೊಡು ವಂತೆ ಕಾರ್ಯದರ್ಶಿಗೆ ತಿಳಿಸಿ ಅವರು ಪುನಃ ಪರಿಶೀಲನೆ ಮಾಡಿ ಕೊಟ್ಟ ಪಟ್ಟಿಯನ್ನು ಮಂತ್ರಿ ಮಂಡಲದ ಮುಂದೆ ಮತ್ತೆ ಇಟ್ಟು ಶ್ರೀಮನ್ಮಹಾರಾಜ ರವರ ಒಪ್ಪಿಗೆಗೆ ಕಳುಹಿಸಿಕೊಟ್ಟರು. ವಿಶ್ವೇಶ್ವರಯ್ಯನವರ ನಿಷ್ಪಕ್ಷಪಾತ ಬುದ್ಧಿ, ಯೋಗ್ಯರಿಗೂ ದಕ್ಷರಿಗೂ ಪ್ರೋತ್ಸಾಹ ಕೊಡಬೇಕೆಂಬ ಅವರ ಆಕಾಂಕ್ಷೆ ಇದರಿಂದ ತಿಳಿಯಬಹುದು.

ಇವರು ಛೀಫ್ ಇಂಜಿನಿಯರಾಗಿದ್ದಾಗಲೂ ಇಂಥದೇ ಘಟನೆ ಇನ್ನೊಂದು ನಡೆಯಿತು. ಮರಾಮತ್ ಇಲಾಖೆಗೆ ಕೆಲವರು ನೌಕರರು ಬೇಕಾಯಿತು ಯೋಗ್ಯರಾದವರ ಪಟ್ಟಿಮಾಡಿ ಕಳುಹಿಸುವಂತೆ ಒಬ್ಬ ದೊಡ್ಡ ಅಧಿಕಾರಿಗಳಿಗೆ ವಿಶ್ವೇಶ್ವರಯ್ಯನವರು ಒಪ್ಪಿಸಿದರು. ಆ ಅಧಿಕಾರಿ ಗಳು ಇವರು ಇಂಥ ದೊಡ್ಡ ಮನುಷ್ಯರ ಮಕ್ಕಳು, ಹತ್ತಿರ ಸಂಬಂಧಿಗಳು ಇತ್ಯಾದಿ ಶಿಫಾರಸು ಪತ್ರಗಳನ್ನಿಟ್ಟು ಪಟ್ಟಿಮಾಡಿ ಕಳುಹಿಸಿದರು. ನನಗೆ ಬೇಕಾದ್ದು ವ್ಯಕ್ತಿಯ ಸಾಮರ್ಥ್ಯ, ಯೋಗ್ಯತೆ, ಶಿಫಾರಸ್ ಪತ್ರಗಳಲ್ಲ ಎಂದು ಸಿಟ್ಟುಗೊಂಡು ವಿಶ್ವೇಶ್ವರಯ್ಯನವರು ಆ ಪಟ್ಟಿಯನ್ನು ಅದೇ ಅಧಿಕಾರಿಗೆ ಹಿಂದಕ್ಕೆ ಕೊಟ್ಟು, ಯೋಗ್ಯತಾನುಸಾರ ಪಟ್ಟಿಮಾಡುವಂತೆ ಆಜ್ಞೆಮಾಡಿದರು

ಈ ಸಿದ್ಧಾಂತಶ್ರದ್ಧೆ ಆಡಳಿತದಲ್ಲಿ ಬಿಗಿ, ಸರ್ಕಾರದಲ್ಲಿ ಮನ್ನಣೆ, ವಿಶ್ವೇಶ್ವರಯ್ಯನವರಲ್ಲಿ ಗೌರವ ಬೆಳೆಯಿಸಿತು.

ಮೈಸೂರಿಗೆ ರೈಲು ಸೇರಿತು. ದಕ್ಷರೂ ಯೋಗ್ಯರೂ ಆದ ಅಧಿಕಾರಿಗಳನ್ನು ಆರಿಸಲು ಪರೀಕ್ಷೆ ನಡೆಯಿತು ಆರು ಜನ ಉತ್ತಮ ಶ್ರೇಣಿಯಲ್ಲಿ ತೇರ್ಗಡೆಯಾದರು. ಬೇಕಾಗಿದ್ದುದು ಇಬ್ಬರೇ ಮೊದಲನೆ ಇಬ್ಬರನ್ನು ತೆಗೆದುಕೊಳ್ಳಬೇಕೆಂದು ಇವರ ಸಹಜವಾದ ಅಭಿಲಾಷೆ. ಆದರೆ ಮಂತ್ರಿ ಮಂಡಲದಲ್ಲಿದ್ದ ಮತ್ತೊಬ್ಬ ಪ್ರತಿಭಾನ್ವಿತರು ಇದಕ್ಕೆ ಒಪ್ಪಲಿಲ್ಲ ಮತ್ತೊಮ್ಮೆ ಪರೀಕ್ಷೆ ನಡೆಯಿತು. ಆಗಲೂ ಆರನೆಯವನು ಆರನೆಯವನೇ ಅವನನ್ನು ಸೇರಿಸಿಕೊಳ್ಳಲೇ ಬೇಕೆಂದು ಒತ್ತಾಯ ಇದು ವಿಶ್ವೇಶ್ವರಯ್ಯನವರಿಗೆ ಸರಿತೋರಲಿಲ್ಲ ಕಡೆಗೊಂದುಪಾಯಮಾಡಿ ಮೂವರನ್ನು ಬೇರೆ ಬೇರೆ ಇಲಾಖೆಗಳಿಗೆ ತೆಗೆದುಕೊಂಡರು.

ಆದರೆ ಇದೇ ಅಂತ್ಯದ ಆರಂಭ, ದಕ್ಷತೆಯ ನಾಶದ ಪ್ರಾರಂಭ ಯೋಗ್ಯತೆಯಿಲ್ಲದವರನ್ನು ಉನ್ನತ ಸ್ಥಾನಗಳಿಗೆ ಏರಿಸುವುದರಿಂದ ಸರ್ಕಾರದ ಬಿಗಿ, ದಕ್ಷತೆ, ಕೆಡುತ್ತದೆ. ಒಮ್ಮೆ ಸರ್ಕಾರದ ಅಧಿಕಾರಿಗಳಲ್ಲಿ ಗೌರವ ತಪ್ಪಿದರೆ, ಸರ್ಕಾರದ ಘನತೆಗೂ ಧಕ್ಕೆಯಾಗುತ್ತದೆ ಹಿಂದುಳಿದ ಪಂಗಡದವರಿಗೆ ಶಿಕ್ಷಣದಲ್ಲಾಗಲಿ, ರಾಜ್ಯಾಡಳಿತದಲ್ಲಾಗಲಿ ಅವಕಾಶ ಕೊಡಬಾರದೆಂಬುದು ಖಂಡಿತ ಇವರ ಉದ್ದೇಶವಲ್ಲ ಹಿಂದುಳಿದ ಜನಾಂಗದ ವಿದ್ಯಾಭ್ಯಾಸಕ್ಕಾಗಿ ಇವರು ಮಾಡಿದಷ್ಟು ಪ್ರಯತ್ನವನ್ನು ಅದುವರೆಗೂ ಯಾರೂ ಮಾಡಿರಲಿಲ್ಲ ಆದರೆ ವಿದ್ಯೆಯನ್ನೇ ನಂಬಿ, ಹೆಚ್ಚು ಶ್ರಮದಿಂದ ಅದರಲ್ಲಿ ಮುಂದುವರಿದಿದ್ದ ಒಂದು ಗುಂಪಿಗೆ, ಇಲ್ಲದ ಅಡ್ಡಿ ಆತಂಕಗಳನ್ನು ತಂದು ಅವರನ್ನು ಹಿಂದುಳಿದವರ ಶ್ರೇಣಿಗೆ ಸೇರಿಸಬೇಕೆಂಬ ಪ್ರಯತ್ನ ಇವರ ಮನಸ್ಸಿಗೆ ಬಹಳ ನೋವು ಮಾಡಿತು ನೆರೆಯ ಮದರಾಸು ಪ್ರಾಂತದಲ್ಲಿ ನಡೆಯುತ್ತಿದ್ದ ಚಳವಳಿಯ ಗಾಳಿ ಇಲ್ಲಿಗೂ ಬೀಸತೊಡಗಿತು. ಹಿಂದುಳಿದ ಜನ ಶಾಲೆಗಳಲ್ಲಿಯೂ, ಸರ್ಕಾರಿ ಉದ್ಯೋಗಗಳಲ್ಲಿಯೂ ತಮಗಾಗಿ ಸ್ಥಾನಗಳನ್ನು ಕಾದಿರಿಸಬೇಕೆಂದು ಚಳುವಳಿ ಮಾಡತೊಡಗಿದರು ಬ್ರಾಹ್ಮಣೇತರರಿಗೆ ಯಾವ ರೀತಿಯ ಸೌಲಭ್ಯಗಳನ್ನೊದಗಿಸಬೇಕೆಂಬು

ದನ್ನು ನಿರ್ಧರಿಸಲು ಶ್ರೀಮನ್ಮಹಾರಾಜರವರು, ಆಗಿನ ಹೈಕೋರ್ಟಿನ ನ್ಯಾಯಾಧೀಶರಾದ ಸರ್ ಲೆಸ್ಲಿ ಮಿಲ್ಲರ್ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನೇಮಿಸಿದರು. ವಿಶ್ವೇಶ್ವರಯ್ಯನವರ ದೃಷ್ಟಿಯೇ ಪ್ರತ್ಯೇಕವಾಗಿತ್ತು. ಮುಂಬರಿಯುತ್ತಿದ್ದ ಸಂಗಡಕ್ಕೆ ಆತಂಕ ಹೊಡದೆ, ವಿದ್ಯಾರ್ಥಿ ವೇತನ, ವಿಶೇಷ ಶಿಕ್ಷಣ ಸೌಲಭ್ಯ ಮೊದಲಾದ ಕ್ರಮಗಳಿಂದ ಹಿಂದುಳಿದವರನ್ನು ಪ್ರಗತಿ ಮಾರ್ಗದಲ್ಲಿ ಕೊಂಡೊಯ್ಯಬೇಕೆಂದು ಇವರ ಮತ. ಲಕ್ಷಾಂತರ ರೂಪಾಯಿಗಳ ವೆಚ್ಚದಿಂದ ಅನೇಕ ನೂತನ ಕೈಗಾರಿಕೆಗಳು ಆಗತಾನೆ ಕಣ್ತೆರೆಯುತ್ತಿದ್ದವು. ಜಾತಿಮತಗಳ ಭೇದಭಾವದಿಂದ ದಕ್ಷರಲ್ಲದವರನ್ನು ಇವುಗಳಲ್ಲಿ ಸೇರಿಸುವುದರಿಂದ ಸುಗಮವಾಗಿ ಕೆಲಸ ನಡೆಯಲು ತೊಂದರೆಯಾದೀತು ಎಂಬ ಶಂಕೆ. ಈ ಕಾರಣಗಳಿಂದ ಮಿಲ್ಲರ್ ಕಮಿಟಿಯ ಸ್ಥಾಪನೆ ಇವರಿಗೆ ಸರಿ ಎನಿಸಲಿಲ್ಲ, ಈ ಸಮಿತಿಯ ದೆಸೆಯಿಂದ ದೇಶದಲ್ಲಿ ಜಾತಿ ಮತಗಳ ದ್ವೇಷಾಸೂಯೆ ಬೆಳೆಯಲು ಅವಕಾಶವಾಗುತ್ತದೆ. ಅದಕ್ಕೆ ಅವಕಾಶ ಕೊಡಬೇಡಿರೆಂದು ಮಹಾಸ್ವಾಮಿಗಳಲ್ಲಿ ಬಹಳವಾಗಿ ಬಿನ್ನವಿಸಿಕೊಂಡರು. ಆದರೆ ಪ್ರಭುಗಳು ಒಪ್ಪದೇ ಹೋದುದರಿಂದ ತಮ್ಮನ್ನು ಕೆಲಸದಿಂದ ನಿವೃತ್ತಿ ಮಾಡಬೇಕಾಗಿ ಅಪೇಕ್ಷಿಸಿದರು ಕೂಡಲೇ ಇವರನ್ನು ನಿವೃತ್ತಿಮಾಡಿದರೆ ಹೊಸದಾಗಿ ಸ್ಥಾಪಿತವಾಗಿದ್ದ ಅನೇಕ ದೊಡ್ಡ ಯೋಜನೆಗಳಿಗೆ ಧಕ್ಕೆಯಾಗಬಹುದೆಂದು ಮಹಾಸ್ವಾಮಿಗಳು ಮನಗಂಡು ಇನ್ನು ಸ್ವಲ್ಪ ಕಾಲವಾದರೂ ನೌಕರಿಯಲ್ಲಿರಬೇಕೆಂದು ಸೂಚಿಸಿದರು ದೇಶ ವಾತ್ಸಲ್ಯ ಪೂರಿತರಾದ ವಿಶ್ವೇಶ್ವರಯ್ಯನವರು ಸಮ್ಮತಿಸಿದೆ ಉಂಟೆ. ಎಂಟು ತಿಂಗಳ ಕಾಲ ಈ ವಿಷಯ ಬಯಲಿಗೆ ಬರಲಿಲ್ಲ. ಈ ಅವಧಿಯಲ್ಲಿ ಯಾವ ಹೊಸ ಯೋಜನೆಗಳೂ ಸ್ಥಾಪಿತವಾಗಲಿಲ್ಲ. ಸ್ಥಾಪಿತವಾಗಿದ್ದ ಉದ್ಯಮಗಳನ್ನು ಭದ್ರಪಡಿಸಿ, ಸರಿಯಾದ ತಳಹದಿಯ ಮೇಲೆ ನಿಲ್ಲಿಸಿ ಎಂಟು ತಿಂಗಳ ತರುವಾಯ ತಮ್ಮ ದಿವಾನಗಿರಿಗೆ ಶರಣುಹೊಡೆದು ಕ್ಷಣಕಾಲವೂ ವಿರಾಮವಿಲ್ಲದ ಅವಿಶ್ರಾಂತ ಸೇವೆಯಿಂದ ವಿಶ್ವೇಶ್ವರಯ್ಯನವರು ನಿವೃತ್ತರಾದರು.

ಕಬ್ಬಿಣದಂತೆ 'ತುಕ್ಕು ಹಿಡಿದು ಹೋಗಬೇಡ, ಉಕ್ಕಿನಂತೆ ತೇದು ಸವೆದು ಸೇವೆ ಸಲ್ಲಿಸು' ಎಂಬ ತಮ್ಮ ಮಾತನ್ನು ಕೃತಿಯಿಂದ ಮಾಡಿ ತೋರಿಸಿ ವಿಶ್ರಾಂತಿಗೆ ಅವಕಾಶ ಮಾಡಿಕೊಂಡರು.

# ಅಖಿಲ ಭಾರತ ರಾಜಕೀಯದಲ್ಲಿ ಪಾತ್ರ

ಕಳೆದ ಐವತ್ತು ವರ್ಷಗಳ ಭಾರತದ ಇತಿಹಾಸವೆಂದರೆ ರಾಷ್ಟ್ರೀಯ ಕಾಂಗ್ರೆಸ್ಸು ನಡೆಸಿದ ಸ್ವಾತಂತ್ರ್ಯ ಹೋರಾಟದ ಇತಿಹಾಸವೇ ಆಗಿದೆ. ಈ ಅವಧಿಯಲ್ಲಿ ಕಾಂಗ್ರೆಸ್ಸನ್ನುಳಿದು ಪ್ರತ್ಯೇಕ ಚರಿತ್ರೆಯನ್ನು ಬರೆಯುವುದೇ ಸಾಧ್ಯವಿಲ್ಲ.

ರಾಮನಿಲ್ಲದ ರಾಮಾಯಣದಂತೆ ಗಾಂಧೀ ಇಲ್ಲದ ಕಾಂಗ್ರೆಸ್. ಕಾಂಗ್ರೆಸ್ಸನ್ನು ಮಹಾತ್ಮನಿಂದ ಬೇರ್ಪಡಿಸುವುದು ಸೂರ್ಯನನ್ನು ಬೆಳಕಿನಿಂದ ಪ್ರತ್ಯೇಕಿಸುವಂತೆ. ಮಹಾತ್ಮನ ಪ್ರಭಾವ ಅಳೆಯಲಾಗದಷ್ಟು ಅಪರಿಮಿತ, ದೇಶದ ಮೇಲೆ. ಮಹಾತ್ಮ ಗಾಂಧಿಯ ಪ್ರಭಾವ ಕೇವಲ ಆಗಿನ ಬ್ರಿಟಿಷ್ ಭಾರತದ ಮೇಲೆ ಮಾತ್ರವಲ್ಲ, ದೇಶೀ ಸಂಸ್ಥಾನಗಳ ಮೇಲೂ ಬೀಳದೆ ಹೋಗಲಿಲ್ಲ.

ಮೋಹನದಾಸ ಗಾಂಧೀ ಕಾಂಗ್ರೆಸ್ಸನ್ನು ಪ್ರವೇಶಿಸಿ ಅಸಹಕಾರ ಹಾಗೂ ಸತ್ಯಾಗ್ರಹ ಚಳವಳಿಯನ್ನು ಸಾರಿ ಕೈಗೊಳ್ಳುವವರೆಗೂ ಕಾಂಗ್ರೆಸ್ಸು ಮಂದಗಾಮಿಯಾಗಿಯೇ ಇತ್ತು. ಮುಂದೆ ಉಗ್ರವಾದಿ, ಅಗ್ನಿಭಕ್ಷಕ ಎನಿಸಿಕೊಂಡ ಗಾಂಧೀಜಿಗೂ ಅದುವರೆಗೆ ಬ್ರಿಟಿಷ್ ಸರಕಾರದಲ್ಲಿ ನಂಬಿಕೆಯಿತ್ತು. ಈ ನಂಬಿಕೆಯೇ ಗಾಂಧಿಯಂಥ ಉಗ್ರವಾದಿಯನ್ನು ಸಹ ೧೯೧೪ ರಿಂದ ೧೯೧೮ ರವರೆಗೆ ನಡೆದ ಪ್ರಥಮ ಜಗತ್-ಸಂಗ್ರಾಮದಲ್ಲಿ ಬ್ರಿಟಿಷರಿಗೆ ಸ್ವೇಚ್ಛೆಯಿಂದ ಪೂರ್ಣ ಸಹಕಾರ ನೀಡುವಂತೆ ಮಾಡಿತು ಸೈನ್ಯಕ್ಕೆ ಗಂಡಾಳುಗಳನ್ನೊದಗಿಸುವ ಕಾರ್ಯದಲ್ಲಿ ತೊಡಗಿದ್ದರು ಗಾಂಧೀ. ಯುದ್ಧಾನಂತರ ಬ್ರಿಟಿಷರು ಭಾರತಕ್ಕೆ ರಾಜ್ಯಾಡಳಿತದಲ್ಲಿ ವಿಶೇಷ ಭಾಗವಹಿಸಲು ಅವಕಾಶಕೊಟ್ಟಾರೆಂಬ ನಂಬಿಕೆಯೇ ಈ ಸಹಕಾರಕ್ಕೆ ಕಾರಣ.

ಆದರೆ ಬ್ರಿಟಿಷ್ ಪ್ರಭುತ್ವವು ಭಾರತಕ್ಕೆ ನೀಡಿದ ಸುಧಾರಣೆಗಳು ಕಾಂಗ್ರೆಸ್ಸನ್ನು ತೃಪ್ತಿಪಡಿಸಲಾರದೆ ಹೋದವು. ಅಹಮದಾಬಾದಿನಲ್ಲಿ ನೆರೆದ

ಕಾಂಗ್ರೆಸ್ಸು ಮಹಾತ್ಮ ಗಾಂಧೀಯವರ ಸೂಚನೆಯಂತೆ ಅಸಹಕಾರ, ಶಾಸನ ಭಂಗ ಚಳವಳಿಗಳನ್ನು ಕೈಗೊಳ್ಳಬೇಕೆಂದು ನಿರ್ಧರಿಸಿತು. ಈ ನಿರ್ಣಯ ದಿಂದ ದೇಶದಲ್ಲಿ ಪ್ರಕ್ಷುಬ್ಧ ವಾತಾವರಣವೇರ್ಪಟ್ಟಿತು.

ಈ ವಾತಾವರಣವನ್ನು ಶಾಂತಗೊಳಿಸಲು ಬ್ರಿಟಿಷರು ಮತ್ತೊಂದು ತಂತ್ರ ಹೂಡಿದರು.

ಭಾರತೀಯರು ಮೊದಲಿನಿಂದಲೂ ರಾಜಭಕ್ತಿಯುತರು ಬ್ರಿಟಿಷ್ ಪ್ರಭುತ್ವದಲ್ಲಿ, ಚಕ್ರವರ್ತಿಗಳಲ್ಲಿ ಭಾರತೀಯರಿಗೆ ವಿಶೇಷ ಗೌರವವಿತ್ತು. ಈ ಸನ್ನಿವೇಶದಲ್ಲಿ ಚಕ್ರವರ್ತಿ ಅಥವಾ ಚಕ್ರವರ್ತಿಯ ಮಗನನ್ನು ಭಾರತಕ್ಕೆ ಕರೆದು ತಂದರೆ, ಭಾರತೀಯರು ಮನ ಒಲಿದು ಸುಧಾರಣೆಗಳನ್ನು ಒಪ್ಪಿ ಕೊಳ್ಳುವರು ಇದರಿಂದ ಗಾಂಧಿಯ ಸೊಕ್ಕನ್ನು ಮುರಿದು ಕಾಂಗ್ರೆಸ್ಸಿನ ಪ್ರಭಾವನ್ನೂ ಅಳಿಸಬಹುದು ಎಂದು ಲೆಕ್ಕ ಹಾಕಿದರು.

ಆದರೆ ಗಾಂಧೀಜೀ ಈ ಬಲೆಗೆ ಬೀಳಲಿಲ್ಲ. ಇಂಗ್ಲೆಂಡಿನ ರಾಜ ಪುತ್ರ—ಪ್ರಿನ್ಸ್ ಆಫ್ ವೇಲ್ಸ್—ಭಾರತಕ್ಕೆ ಈಗ ಬಾರದಿರುವುದೇ ಲೇಸು. ಬರುವುದಾದರೆ ಆತನ ಬರುವಿಕೆಯನ್ನು ಶಾಂತ ಮಾರ್ಗದಿಂದ ಪ್ರತಿಭಟಿಸ ಬೇಕಾಗುತ್ತದೆ ಎಂದು ಸಾರಿದರು. ಆತ ಭಾರತದಲ್ಲಿ ಅಡಿಯಿಡುವ ದಿನ ೧೭ ನವಂಬರ್ ೧೯೨೧ ಭಾರತಾದ್ಯಂತ ಹರತಾಳ ಆಚರಿಸಲ್ಪಟ್ಟಿತು. ಪರ ದೇಶೀ ವಸ್ತ್ರಗಳ ದಹನ ನಡೆಯಿತು. ಪ್ರಿನ್ಸ್ ಅಫ್ ವೇಲ್ಸ್ ಬೊಂಬಾಯಿಗೆ ಬಂದಿಳಿದ ದಿನ ಬೊಂಬಾಯಲ್ಲಿ ಭಾರಿಸಭೆ, ಹರತಾಳ, ವಸ್ತ್ರದಹನ ನಡೆದವು. ಕಾರ್ಯಕ್ರಮಗಳಲ್ಲಿ ಭಾಗವಹಿಸದ ಹಲವರ ಅಂಗಡಿಗಳು ಲೂಟಿಯಾದವು. ಪೋಲೀಸರು ಗುಂಡು ಹಾರಿಸಿದರು. ಹಲವರು ಸತ್ತರು, ಅನೇಕರಿಗೆ ಗಾಯಗಳಾದವು

ರಾಜಕುಮಾರನು ಕಲ್ಕತ್ತೆಯನ್ನು ಮುಟ್ಟುವ ದಿನ ಭಾರಿ ಪ್ರಮಾಣ ದಲ್ಲಿ ಹರತಾಳವನ್ನಾಚರಿಸಬೇಕೆಂದು ಸನ್ನಾಹ ನಡೆಯುತ್ತಿತ್ತು. ಸ್ವಯಂ ಸೇವಕರ ಪಡೆಯನ್ನು ಸಿದ್ಧಗೊಳಿಸಲಾಗುತ್ತಿತ್ತು. ಪ್ರಭುತ್ವವು ಇದನ್ನು ಅಕ್ರಮಕೂಟವೆಂದು ಸಾರಿ, ರಾಷ್ಟ್ರಪತಿಗಳಾಗಿ ಚುನಾಯಿತರಾಗಿದ್ದ ದೇಶ ಭಕ್ತ ಸಿ. ಆರ್. ದಾಸರನ್ನೂ ಅನೇಕ ಸ್ವಯಂಸೇವಕರನ್ನೂ ಬಂಧಿಸಿತು.

ವೈಸರಾಯರನ್ನು ಭೇಟಿ ಮಾಡಿ ದೇಶದಲ್ಲಿ ಶಾಂತವಾತಾವರಣ ಮತ್ತೆ ತಲೆದೋರುವಂತೆ ಮಾಡಬೇಕೆಂದು ಕಾತುರರಾಗಿದ್ದ ಪಂಡಿತ ಮದನ ಮೋಹನ ಮಾಲವೀಯರು, ಡಾ|| ಅನಿಬೆಸೆಂಟ್, ಸರ್ ಎಂ ವಿಶ್ವೇಶ್ವರಯ್ಯ, ಜಯಕರ್ ಮೊದಲಾದವರನ್ನು ಕಲ್ಕತ್ತೆಗೆ ಕರೆಯಿಸಿದರು. ಸರ್ ಎಂ. ವಿಶ್ವೇಶ್ವರಯ್ಯನವರೂ ಹೊರಟರು ಇವರೆಲ್ಲರೂ ಆಗಿನ ವೈಸರಾಯ್ ಲಾರ್ಡ್ ರೀಡಿಂಗ್ ಭೇಟಿ ಮಾಡಿ, ಸರ್ವಪಕ್ಷ ಸಮ್ಮೇಳನ ಕರೆಸಿ, ದೇಶದಲ್ಲಿ ಶಾಂತಿ ಸ್ಥಾಪಿಸಲು ಪ್ರಯತ್ನಿಸಬೇಕಾಗಿ ಅವರಲ್ಲಿ ಪ್ರಾರ್ಥಿಸಿದರು.

ಕಾಂಗ್ರೆಸ್ ಅಧ್ಯಕ್ಷರಾಗಿ ಚುನಾಯಿತರಾಗಿದ್ದ ಚಿತ್ತರಂಜನ ದಾಸರು ದಸ್ತಗಿರಿಯಾದುದರಿಂದ ಅವರ ಸ್ಥಾನಕ್ಕೆ ಹಕೀಂ ಅಜಮಲ್ ಖಾನರು ಚುನಾಯಿತರಾದರು ಅಹಮದಾಬಾದಿನಲ್ಲಿ ಇವರ ಅಧ್ಯಕ್ಷತೆಯಲ್ಲಿ ಸಭೆ ನಡೆದು ಬ್ರಿಟಿಷರ ದಬ್ಬಾಳಿಕೆಯನ್ನು ಖಂಡಿಸುವ ನಿರ್ಣಯಗಳಾದವು ಶಾಸನ ಭಂಗ ಚಳುವಳಿ ಕೈಗೊಳ್ಳಲು ತಕ್ಕ ಸನ್ನಾಹಗಳನ್ನು ಮಾಡಬೇಕೆಂದೂ, ಅದಕ್ಕಾಗಿ ಸ್ವಯಂ ಸೇವಕರ ತಂಡಗಳನ್ನು ಏರ್ಪಡಿಸಬೇಕೆಂದೂ ನಿರ್ಣಯಗಳಾದವು. ತುರ್ಕಿಯ ಖಲೀಫರನ್ನು ಮತ್ತೆ ಪೀಠಕ್ಕೆ ತರಬೇಕೆಂಬ ಖಿಲಾಫತ್ ಚಳುವಳಿಗೆ ಪುಷ್ಟಿ ದೊರೆಯಿತು ಪಂಜಾಬಿನ ಘೋರ ದುರಾಚಾರಕ್ಕೆ ತಕ್ಕ ವಿಚಾರಣೆ, ಪ್ರತೀಕಾರ ಆಗಬೇಕೆಂದು ನಿರ್ಣಯವಾಯಿತು ಒಂದೇ ವರುಷದಲ್ಲಿ ಸ್ವರಾಜ್ಯಗಳಿಸಿ ಕೊಡುವುದಾಗಿ ಹೇಳಿಕೆಯಿತ್ತು ದೇಶವನ್ನೆಲ್ಲಾ ಮಹತ್ತರ ಆಸೆ, ಸ್ಫೂರ್ತಿಯಿಂದ ಮಹಾತ್ಮಜೀಯವರು ಹುರಿದುಂಬಿಸಿದ್ದರು.

ಅಸಹಕಾರ ಚಳುವಳಿಯಿಂದ ದೇಶ ಅನಾಯಕವಾದೀತು. ದೇಶದಲ್ಲಿ ಶಾಂತಿ ನೆಲೆಸಲು ಸರ್ವ ಪ್ರಯತ್ನವನ್ನೂ ಮೊದಲೇ ಮಾಡಬೇಕೆಂಬ ಸದುದ್ದೇಶದಿಂದ, ಬ್ರಿಟಿಷರಲ್ಲಿ ಇನ್ನೂ ನಂಬಿಕೆ-ವಿಶ್ವಾಸವಿಟ್ಟಿದ್ದ ಮಾಳವೀಯ, ವಿಶ್ವೇಶ್ವರಯ್ಯ ಮೊದಲಾದವರು ಬೊಂಬಾಯಲ್ಲಿ ಸರ್ವಪಕ್ಷ ಸಮ್ಮೇಳನ ಕರೆಸಿದರು. ದೇಶದ ನಾನಾ ಭಾಗಗಳಿಂದ ಈ ಸಮ್ಮೇಳನಕ್ಕೆ ಸುಮಾರು ೨೦೦ ಮಂದಿ ಪ್ರಮುಖರು ದಯಮಾಡಿಸಿದ್ದರು, ವೈಸರಾಯರ ಮಂತ್ರಿ

ಮಂಡಲದಿಂದ ಆಗತಾನೆ ರಾಜೀನಾಮೆ ಕೊಟ್ಟು ಹೊರಗೆ ಬಂದಿದ್ದ ಸರ್ ಶಂಕರ್‌ನಾಯರವರು ಈ ಸರ್ವಪಕ್ಷ ಸಮ್ಮೇಳನದ ಅಧ್ಯಕ್ಷರಾಗಿ ಚುನಾಯಿತರಾದರು. ಸಮ್ಮೇಳನದಲ್ಲಿ ಕಾಂಗ್ರೆಸ್ಸು ಭಾಗವಹಿಸಲು ನಿರಾಕರಿಸಿದರೂ ಮಹಾತ್ಮಾ ಗಾಂಧಿಯವರು ಸಭೆಯಲ್ಲಿ ಹಾಜರಿದ್ದು ಅಹಮದಾಬಾದಿನ ಅಧಿವೇಶನದಲ್ಲಿ ತೀರ್ಮಾನವಾದ ನಿರ್ಣಯಗಳನ್ನು ವಿವರಿಸಿದರು. ಸಮ್ಮೇಳನದಲ್ಲಿ ಮಂಡಿಸಲು ಕರಡು ನಿರ್ಣಯವು ಸಿದ್ಧವಾಯಿತು. ಈ ನಿರ್ಣಯವನ್ನು ತಾವು ಒಪ್ಪಲಾರೆನೆಂದು ಸರ್ ಶಂಕರ್‌ನಾಯರ್ ತಮ್ಮ ಅಧ್ಯಕ್ಷ ಸ್ಥಾನ ಬಿಟ್ಟು ಹಠಾತ್ತನೆ ಹೊರಬಿದ್ದರು. ಇಂಥ ಬಿಕ್ಕಟ್ಟಿನ ಸನ್ನಿವೇಶದಲ್ಲಿ ಸರ್ವಾದರಣೀಯರಾದ ವಿಶ್ವೇಶ್ವರಯ್ಯನವರನ್ನು ಪಂಡಿತ ಮಾಳವೀಯರ ಸಲಹೆಯಂತೆ ಸಭೆಯು ಸರ್ವಾನುಮತದಿಂದ ಅಧ್ಯಕ್ಷರಾಗಿ ಚುನಾಯಿಸಿತು. ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆ, ಸರ್ಕಾರದ ದಬ್ಬಾಳಿಕೆಯನ್ನು ಖಂಡಿಸುತ್ತಾ, ಸರ್ಕಾರಕ್ಕೂ-ಕಾಂಗ್ರೆಸ್ಸಿಗೂ ಸಮಾಧಾನವೇರ್ಪಡುವವರೆಗೆ ಅಹಮದಾಬಾದಿನ ನಿರ್ಣಯವನ್ನು ಕಾರ್ಯರೂಪಕ್ಕೆ ಕಾಂಗ್ರೆಸ್ಸು ತರಕೂಡದೆಂದೂ ; ಪಂಜಾಬಿನ ಜಲಿಯನ್‌ವಾಲಾಬಾಗ್ ದೌರ್ಜನ್ಯ, ಖಿಲಾಫತ್ ಚಳುವಳಿ, ಸ್ವರಾಜ್ಯ ಸ್ಥಾಪನೆ ಈ ವಿಷಯಗಳನ್ನು ಕೂಲಂಕಷವಾಗಿ ವಿಮರ್ಶಿಸಲು ಒಂದು ಸರ್ವಪಕ್ಷ ಸಮ್ಮೇಳನವನ್ನು ಕೂಡಲೇ ಸರ್ಕಾರದ ಆಶ್ವಾಸನದ ಮೇಲೆ ಕರೆಸಬೇಕೆಂದೂ; ದೇಶದಲ್ಲಿ ಶಾಂತಿ ವಾತಾವರಣ ಏರ್ಪಡಲು ರೌಲಟ್ ಮಸೂದೆಗಳನ್ನು ಸರ್ಕಾರ ಹಿಂದಕ್ಕೆ ತೆಗೆದುಕೊಳ್ಳಬೇಕೆಂದೂ ಒಂದು ದೀರ್ಘ ನಿರ್ಣಯ ಮಾಡಿತು. ಮಹಮದಾಲಿ ಜಿನ್ನಾ ಅವರೇ ಈ ನಿರ್ಣಯವನ್ನು ಸಭೆಯಲ್ಲಿ ಮಂಡಿಸಿದರು. ನಿರ್ಣಯ ಅಂಗೀಕೃತವಾಯ್ತು. ಮುಂದಿನ ಕಾರ್ಯಕ್ರಮಗಳನ್ನು ಕೈಗೊಳ್ಳಲು ೨೧ ಮಂದಿ ತಜ್ಞರ ಉಪಸಮಿತಿ ನೇಮಕವಾಯಿತು. ವಿಶ್ವೇಶ್ವರಯ್ಯನವರೇ ಈ ಉಪಸಮಿತಿಯ ಅಧ್ಯಕ್ಷರಾದರು. ಜಿನ್ನಾ, ಜಯಕರ್, ನಟರಾಜನ್ ಅವರು ಕಾರ್ಯದರ್ಶಿಗಳು.

ಬ್ರಿಟಿಷರು ಈ ನಿರ್ಣಯಕ್ಕೆ ಮನ್ನಣೆ ಕೊಡುತ್ತಾರೆಂದು ಕಾಂಗ್ರೆಸು ಭಾವಿಸಲಿಲ್ಲ. ಆವರೂ ಮಾಳವೀಯ, ವಿಶ್ವೇಶ್ವರಯ್ಯ, ಜಯಕರ್ ಮೊದಲಾದ ದೊಡ್ಡ ಗಣ್ಯ ವ್ಯಕ್ತಿಗಳ ಪ್ರಾರ್ಥನೆಯನ್ನು ಮನ್ನಿಸಿ ಮಹಾತ್ಮ

ಗಾಂಧೀಜಿಯೂ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯೂ ಈ ಗೋಷ್ಠಿಯ ನಿರ್ಣಯವನ್ನು ಪುರಸ್ಕರಿಸಿ, ಅಹಮದಾಬಾದಿನ ನಿರ್ಣಯವನ್ನು ಕೂಡಲೇ ಆಚರಣೆಗೆ ತರುವುದನ್ನು ನಿಲ್ಲಿಸಿತು

ಆದರೆ ಸದುದ್ದೇಶದ ಈ ಸರ್ವಪಕ್ಷ ಸಮ್ಮೇಳನದ ಪ್ರಯತ್ನ ಸಫಲ ವಾಗಲಿಲ್ಲ ವೈಸರಾಯರು ಈ ನಿರ್ಣಯಕ್ಕೆ ಪುರಸ್ಕಾರ ಕೊಡಲಿಲ್ಲ ಮಹಾತ್ಮಾ ಗಾಂಧಿಯವರು ಬಾರಡೋಲಿಯಲ್ಲಿ ಶಾಸನಭಂಗ ಚಳುವಳಿ ಯನ್ನು ಕೈಗೊಳ್ಳುವುದಾಗಿ ವೈಸರಾಯರಿಗೆ ಬರೆದು ತಿಳಿಸಿದರು. ಇಂಥಾ ಪರಿಸ್ಥಿತಿಯಲ್ಲಿ ಮಧ್ಯಸ್ಥಿಕೆಯಿಂದ ಯಾವ ಪ್ರಯೋಜನವೂ ಆಗದೆಂದು ವಿಶ್ವೇಶ್ವರಯ್ಯ ಗೋಷ್ಠಿಗೆ ವೈಸರಾಯರು ತಿಳಿಸಿದರು. ಈ ಗೋಷ್ಠಿಯ ಪ್ರಯತ್ನವು ಇಷ್ಟಕ್ಕೇ ಮುಕ್ತಾಯವಾಯಿತು.

ವಿಶ್ವೇಶ್ವರಯ್ಯ ಗೋಷ್ಠಿಯ ಪ್ರಯತ್ನವು ಸಫಲವಾಗಿದ್ದರೆ ಭಾರತದ ಇತಿಹಾಸವು ಯಾವ ರೀತಿಯಾಗುತ್ತಿತ್ತೋ ಎಂಬುದು ಸಂದಿಗ್ಧ ವಿಷಯ. ಅದು ಹಾಗಿರಲಿ. ಭಾರತದ ನಾನಾ ಪಕ್ಷಗಳು ವಿಶ್ವೇಶ್ವರಯ್ಯನವರನ್ನು ಏಕಮತದಿಂದ ಅಧ್ಯಕ್ಷರನ್ನಾಗಿ ಮಾಡಿದ್ದು ಇಡೀ ಭಾರತಕ್ಕೇ ಅವರಲ್ಲಿದ್ದ ವಿಶೇಷ ಗೌರವವನ್ನು ವ್ಯಕ್ತಪಡಿಸುತ್ತದೆ. ಪಕ್ಷವಿಪಕ್ಷಗಳನ್ನು ಸಮದೃಷ್ಟಿ ಯಿಂದ ಕಾಣುವ ಅವರ ಪಕ್ಷಪಾತರಹಿತ ಮನೋಧರ್ಮ, ದೇಶಭಕ್ತಿ ಇವೇ ಇದಕ್ಕೆ ಮುಖ್ಯಕಾರಣ. ಮಹಾತ್ಮ ಗಾಂಧಿಯವರು ತಾತ್ಕಾಲಿಕವಾಗಿ ಯಾದರೂ ಅಸಹಕಾರ ಚಳವಳಿಯನ್ನು ಹಿಂಬದಿಗಿಡಲು ವಿಶ್ವೇಶ್ವರಯ್ಯ, ಮಾಳವೀಯ ಇವರಲ್ಲಿದ್ದ ಗೌರವ ಮತ್ತು ಪೂಜ್ಯಭಾವನೆಯೂ ಒಂದು ಮುಖ್ಯ ಕಾರಣ. ಬ್ರಿಟಿಷರಿಗೂ ವಿಶ್ವೇಶ್ವರಯ್ಯನವರಲ್ಲಿ ವಿಶೇಷ ಮನ್ನಣೆ ಇಂಗ್ಲೆಂಡಿನ ಭಾರತ ಮಂಡಲಿಯಲ್ಲಿ ವಿಶ್ವೇಶ್ವರಯ್ಯನವರು ಒಂದು ಸ್ಥಾನ ಸ್ವೀಕರಿಸುವಂತೆ ಮಾಂಟೆಗ್ಯೂ ಅವರು ಆಹ್ವಾನವಿತ್ತುದೇ ಇದಕ್ಕೆ ನಿದರ್ಶನ. ಆದರೆ ರಾಜಕೀಯವೇ ಅವರ ಸಾರಸರ್ವಸ್ವವಾಗಿರಲಿಲ್ಲ. ಅವರಿಗೆ ಬೇ ಕಾಗಿದ್ದುದು ಮುಖ್ಯವಾಗಿ ದೇಶದ ಆರ್ಥಿಕಾಭ್ಯುದಯ. ಕಟ್ಟಕಡೆಗೆ ಎಲ್ಲ ರಾಜಕೀಯಗಳ ಗುರಿಯೂ ಇದೇ ಅಲ್ಲವೇ? ರಾಜಕೀಯ ಸ್ವಾತಂತ್ರ್ಯ ವನ್ನು ಅವರು ಅಪೇಕ್ಷಿಸುತ್ತಿರಲಿಲ್ಲವೆಂದಲ್ಲ. ಈ ಗುರಿಯನ್ನು ಬ್ರಿಟಿಷರ ಅಧೀನದಲ್ಲಿ ಕಾಲಕ್ರಮೇಣ ಪಡೆಯಬಹುದು ಎಂದು ಅವರ ನಂಬಿಕೆ.

"ಬ್ರಿಟಿಷ್ ಪ್ರಭುತ್ವದ ಆಳ್ವಿಕೆಯ ಅಂತ್ಯ ಪರಿಣಾಮ, ಸಕಲ ಕ್ಷೇತ್ರಗಳಲ್ಲಿಯೂ ದೇಶವನ್ನು ಅಧೋಗತಿಗಿಳಿಸುವುದೇ ಆಗಿದೆ. ಸರ್ವ ಕ್ಷೇತ್ರಗಳಲ್ಲಿಯೂ ಕಡೆಯ ಸ್ಥಾನವನ್ನು ಗಳಿಸುವುದರಲ್ಲಿ ಭಾರತವು ಪೈಪೋಟಿ ಮಾಡುತ್ತಿರುವಂತೆ ಕಾಣುತ್ತದೆ. ಎಲ್ಲೋ ಹತ್ತು ಜನಕ್ಕೆ ಮಾತ್ರ ಅನುಕೂಲ ಮಾಡಿಕೊಟ್ಟು, ಕೋಟ್ಯಾಂತರ ಜನರನ್ನು ದಟ್ಟದಾರಿದ್ರ್ಯ, ಕಡುಬಡತನ, ಕಷ್ಟಸಂಕಟಗಳಿಗೆ ಈ ರಾಜ್ಯಭಾರ ಈಡುಮಾಡಿದೆ. ಇದರಿಂದ ದೇಶವು ಪಾರಾಗಬೇಕಾದರೆ ಪ್ರಾಂತಗಳಿಗೆ ತಮ್ಮ ಹಣಕಾಸಿನ ಮೇಲೆ ಪೂರ್ಣ ಸ್ವಾತಂತ್ರ್ಯವುಳ್ಳ ಸಂಯುಕ್ತ ರಾಜ್ಯಾಂಗ ವ್ಯವಸ್ಥೆ ಜಾರಿಗೆ ಬರಬೇಕು. ದೇಶರಕ್ಷಣೆಯ ನೌಕಾಬಲ, ಸೈನ್ಯಬಲ ಇವು ಭಾರತೀಯರ ಅಧೀನವಾಗಬೇಕು. ಸೈನ್ಯಖಾತೆ, ನೌಕಾಬಲ, ವಿಮಾನದಳ ಇವುಗಳಿಗೆ ಬೇಕಾಗುವ ಶಸ್ತ್ರಾಸ್ತ್ರಗಳೆಲ್ಲವೂ ಕ್ರಮೇಣ ಭಾರತದಲ್ಲಿಯೇ ಸಿದ್ಧವಾಗಬೇಕು. ಪ್ರತ್ಯೇಕ ಜಾತೀಯ ಮತದಾನ ಪದ್ಧತಿಗೆ ಎಡೆಗೊಡಬಾರದು. ಈ ಭಾವನೆ ರಾಷ್ಟ್ರಹಿತಕ್ಕೆ ವಿರುದ್ಧ. ಪ್ರಗತಿ ವಿರೋಧ. ಬಹಳ ಆವಶ್ಯಕವಾದರೆ, ವಿಶೇಷ ಸಂದರ್ಭಗಳಲ್ಲಿ ಹಿಂದುಳಿದ ಪಂಗಡಗಳಿಗೆ ಸ್ಥಾನ ಕೊಡಬಹುದು. ವೋಟು ಕೊಡುವ ಪ್ರತಿ ಮತದಾರನಿಗೂ ಅಕ್ಷರ ಪರಿಜ್ಞಾನವಾದರೂ ಇರಬೇಕು. ಆದರೆ ಯಾವ ಕಾರಣದಿಂದಲೂ ಈ ಅವಧಿ ಹತ್ತು ವರ್ಷಗಳನ್ನು ಮೀರಿರಬಾರದು." ಇವು ೧೯೩೪ರಲ್ಲಿ ವಿಶ್ವೇಶ್ವರಯ್ಯನವರು ಪ್ರಕಟಿಸಿದ 'ಭಾರತಕ್ಕೊಂದು ಆರ್ಥಿಕ ಯೋಜನೆ' ಎಂಬ ಪುಸ್ತಕದಲ್ಲಿ ಕಂಡು ಬರುವ ಅವರ ಅಭಿಪ್ರಾಯಗಳು.

ವಿಶ್ವೇಶ್ವರಯ್ಯನವರು ತಮ್ಮ ನಡೆನುಡಿಗಳಲ್ಲಿ ಎಂತು ನಿಧಾನಿಗಳೋ ಅಂತೆಯೇ ರಾಜಕೀಯದಲ್ಲಿಯೂ. ಅವರು ಉಗ್ರವಾದಿಗಳಲ್ಲ, ತೀವ್ರ ಪಕ್ಷಕ್ಕೆ ಸೇರಿದವರಲ್ಲ. ಮಹಾತ್ಮ ಗಾಂಧೀ, ನೆಹರೂ, ತಿಲಕ್ ಮೊದಲಾದ ನಾಯಕರನ್ನು ಅವರು ಚೆನ್ನಾಗಿ ಬಲ್ಲವರಾದರೂ, ಗೋಖಲೆ, ರಾನಡೆ, ಜಯಕರ್, ಆನಿಬೆಸಂಟ್ ಮೊದಲಾದ 'ಲಿಬರಲ್' ಪಕ್ಷಕ್ಕೆ ಸೇರಿದ ಮುಖಂಡರ ಪ್ರಭಾವ ಅವರ ಮೇಲೆ ಹೆಚ್ಚಾಗಿತ್ತು ಎಂದು ಹೇಳಬಹುದು. ೨೫ ವರುಷಗಳಿಗೂ ಹೆಚ್ಚು ಕಾಲ ಗೋಖಲೆಯವರ ಸ್ನೇಹ ಭಾಗ್ಯ ಅವರಿಗೆ ದೊರಕಿತ್ತು. ಅಲ್ಲದೆ ಆಂಗ್ಲರ ಪ್ರಭಾವವೂ ಅವರ ಮೇಲೆ ವಿಶೇಷ

ವಾಗಿತ್ತು. ಸ್ವಭಾವದಿಂದಲೂ, ಸಂಪರ್ಕ ಸಹವಾಸಗಳಿಂದಲೂ ಅವರಿಗೆ 'ಲಿಬರಲ್' ಪಕ್ಷದ ರೀತಿನೀತಿಗಳೇ ಒಪ್ಪಿಗೆಯಾಗಿದ್ದುವು

ಭಾರತ ಸ್ವಾತಂತ್ರ್ಯ ಹೋರಾಟದ ಇತಿಹಾಸವನ್ನು ಅವಲೋಕಿಸಿದರೆ, ಬ್ರಿಟಿಷ್ ಭಾರತದ ಮುಖಂಡರ ಪ್ರಭಾವ ದೇಶೀಯ ಸಂಸ್ಥಾನಗಳ ಮೇಲೂ ಆಗುತ್ತಿದ್ದುದು ವೇದ್ಯವಾಗುತ್ತದೆ. ಆದರೆ ದೇಶೀಯ ಸಂಸ್ಥಾನದ ನೌಕರಿಯಲ್ಲಿದ್ದು, ದಿವಾನರಾಗಿ ಬಾಳಿ ಅಖಿಲ ಭಾರತದ ರಾಜಕೀಯದಲ್ಲಿ ಪ್ರಭಾವ ಬೀರಿರುವ ಮಹಾ ವ್ಯಕ್ತಿಗಳ ಸಂಖ್ಯೆ ಅತಿವಿರಳ. ಈ ವಿರಳರಲ್ಲಿ ಅಗ್ರಸ್ಥಾನ ಪಡೆದಿರುವ ವ್ಯಕ್ತಿಗಳಲ್ಲಿ ವಿಶ್ವೇಶ್ವರಯ್ಯನವರೂ ಒಬ್ಬರು.

ವಿಶ್ವೇಶ್ವರಯ್ಯನವರು ೧೯೨೨ ರ ಸರ್ವಪಕ್ಷ ಸಮ್ಮೇಳನದಲ್ಲಿ ವಹಿಸಿದ ಪ್ರಧಾನ ಭಾಗವನ್ನು ಈಗಾಗಲೇ ತಿಳಿಸಲಾಗಿದೆ. ೧೯೨೮ ರಲ್ಲಿ ತಿರುವಾಂಕೂರಿನಲ್ಲಿ ನಡೆದ ದಕ್ಷಿಣ ಭಾರತ ದೇಶೀಯ ಸಂಸ್ಥಾನಗಳ ಪ್ರಜಾ ಪರಿಷತ್ತಿನ ಅಧ್ಯಕ್ಷರಾಗಿ ದೇಶೀಯ ಸಂಸ್ಥಾನದ ಪ್ರಜೆಗಳ ಪ್ರೀತ್ಯಾದರಗಳಿಗೆ ಪಾತ್ರರಾದರು. ಮೈಸೂರಿನ ದಿವಾನರಾಗಿ ೧೯೧೭ ರಲ್ಲಿ ಬಿಕಾನೀರ್ ಮತ್ತು ಪಾಟಿಯಾಲಾದಲ್ಲಿ ನಡೆದ ರಾಜರ ಮತ್ತು ದಿವಾನರುಗಳ ಸಮ್ಮೇಳನದಲ್ಲಿಯೂ ಇವರು ಭಾಗವಹಿಸಿದ್ದರು. 'ನಿಮ್ಮ ದಿವಾನ್‌ಗಿರಿ ಅವಧಿಯಲ್ಲಿ ನನಗೆ ದೊರತಿರುವಷ್ಟು ಮನಶ್ಶಾಂತಿ ಇನ್ನು ಯಾವ ಕಾಲದಲ್ಲೂ ಲಭಿಸಿಲ್ಲ' ಎಂದು ಮಹಾರಾಜರಿಂದಲೂ, 'ಪ್ರಜಾ ಪ್ರಭುತ್ವದ ಸೋಪಾನವನ್ನು ತಳದಿಂದ ಕಟ್ಟಲು ಪ್ರಯತ್ನಿಸಿದ ಜನಪ್ರಿಯ ದಿವಾನ್' ಎಂದು ಮಹಾಜನರಿಂದಲೂ ಹೊಗಳಿಸಿಕೊಳ್ಳುವುದು ಸಾಮಾನ್ಯವಲ್ಲ. ಅತ್ತ ಆಳರಸರ ನಂಬಿಕೆ ಗಳಿಸಿ, ಇತ್ತ ಪ್ರಜೆಗಳ ಪ್ರೀತಿ ವಿಶ್ವಾಸಗಳಿಗೆ ಪಾತ್ರರಾಗಿ ರಾಜಕೀಯ ನೌಕೆಯನ್ನು ಜಾಣ್ಮೆಯಿಂದ, ಜಯಪ್ರದವಾಗಿ ನಡೆಸಿಕೊಂಡು ಬಂದ ವ್ಯಕ್ತಿಗಳಲ್ಲಿ ಅಗ್ರಗಣ್ಯರು ವಿಶ್ವೇಶ್ವರಯ್ಯನವರು.

ಬಹುಕಾಲದಿಂದ ಪರದಾಸ್ಯದಲ್ಲಿ ಸಿಕ್ಕಿ ತೊಳಲುತ್ತಿದ್ದ ನಮ್ಮ ರಾಷ್ಟ್ರದಲ್ಲಿ ರಾಜಕೀಯಕ್ಕೆ ಹೆಚ್ಚು ಪ್ರಾಧಾನ್ಯ ದೊರೆಯುತ್ತಿರುವುದರಲ್ಲಿ ಆಶ್ಚರ್ಯ ಪಡಬೇಕಾದ್ದಿಲ್ಲ. ಆದರೆ ಪರದಾಸ್ಯದ ಬೇಗೆಯ ಅನುಭವ

ವನ್ನು ತಮ್ಮ ಕಾರ್ಯ ಕ್ಷೇತ್ರಗಳಲ್ಲಿ ಪಡೆದಿದ್ದ ವಿಶ್ವೇಶ್ವರಯ್ಯನವರು ರಾಜಕೀಯದಲ್ಲೇ ಮಗ್ನರಾಗಿ ತಲ್ಲೀನರಾಗದೆ ದೇಶದ ಆರ್ಥಿಕಾಭಿವೃದ್ಧಿ ಕಡೆ ಹೆಚ್ಚು ಗಮನ ಕೊಡಲು ಮನಸ್ಸು ಮಾಡಿದ್ದು ಭಾರತದ ಭಾಗ್ಯವೇ ಸರಿ. ಅವರ ವಿಶಾಲ ದೃಷ್ಟಿ, ನ್ಯಾಯಪರತೆ, ಸರ್ವಸಮನ್ವಯ ಭಾವ, ಇವು ಅವರು ನಾನಾ ಕ್ಷೇತ್ರಗಳಲ್ಲಿ ಕೆಲಸ ಮಾಡಲು ಸಹಾಯಕಗಳಾದುವು ೧೯೨೧ ರಲ್ಲಿ ಅವರು ಬೊಂಬಾಯಿ ಸರ್ಕಾರದ ಯಾಂತ್ರಿಕ, ಔದ್ಯೋಗಿಕ, ವಿದ್ಯಾಭ್ಯಾಸ ವಿಚಾರಣಾ ಸಮಿತಿಯ ಸದಸ್ಯರಾಗಿಯೂ; ೧೯೨೨ರಲ್ಲಿ ನವದೆಹಲಿ ರಾಜಧಾನಿ ನಿರ್ಮಾಣ ಸಮಿತಿಯ ಸದಸ್ಯರಾಗಿಯೂ; ೧೯೨೫ರಲ್ಲಿ ಇಂಡಿಯಾ ಸರ್ಕಾರದಿಂದ ನೇಮಕವಾದ ಆರ್ಥಿಕ ಸಮಾಲೋಚನೆ ಸಮಿತಿಯ ಅಧ್ಯಕ್ಷರಾಗಿಯೂ; ೧೯೨೬ರಲ್ಲಿ ಬೊಂಬಾಯಿ 'ಬ್ಲಾಕ್ ಬೇ' ವಿಚಾರಣಾ ಸಮಿತಿಯ ಸದಸ್ಯರಾಗಿಯೂ ಸೇವೆ ಸಲ್ಲಿಸಿದುದು ಅವರ ವಿದ್ಯಾ ವೈಶಾಲ್ಯ ವೈವಿಧ್ಯತೆಗಳ ನಿದರ್ಶನ. ಬೊಂಬಾಯಿ ದ್ವೀಪದ ಸ್ಥಳಾ ಭಾವವನ್ನು ನಿವಾರಿಸಲು ಬಹು ಕಡಮೆ ನೀರಿದ್ದು ಜೌಗು ಸಮುದ್ರ ಪ್ರದೇಶವಾಗಿದ್ದ ಭಾಗದಿಂದ ನೀರನ್ನು ಪಂಪುಮಾಡಿ ಸಮುದ್ರವನ್ನು ಒತ್ತಿಸಿ ಆ ನೆಲವನ್ನು ನಗರಕ್ಕೆ ಸೇರಿಸಿಕೊಳ್ಳಬೇಕೆಂಬ ಯೋಜನೆ ಸಿದ್ಧವಾಯಿತು. ಅಂದಾಜು ವೆಚ್ಚ ಏಳುವರೆ ಲಕ್ಷ. ಈ ಕೆಲಸಗಳೆಲ್ಲವನ್ನೂ ಆಂಗ್ಲೇಯ ಕಂಪೆನಿಗಳಿಗೆ ಒಪ್ಪಿಸಲಾಯಿತು. ಹಲವು ವರ್ಷಗಳು ಕಳೆದರೂ ಕೆಲಸವು ಭರದಿಂದ ಸಾಗದೆ ನಿಧಾನವಾಗುತ್ತಾ, ಏಳುವರೆಯಿಂದ ವೆಚ್ಚ ಹದಿನಾಲ್ಕು ಲಕ್ಷಕ್ಕೆ ಏರಿತು. ಪ್ರಮುಖ ದೇಶಭಕ್ತರಾದ ನಾರಿಮನ್ ಅವರು ಇದರಲ್ಲಿ ಏನೋ ರಹಸ್ಯವಿದೆಯೆಂದು ಅನೇಕ ದೊಡ್ಡ ದೊಡ್ಡ ಅಧಿಕಾರಿಗಳ ಮೇಲೆ ಅಪವಾದನೆ ಹೊರಸಿದರು. ಶಾಸನ ಸಭೆಯಲ್ಲಿ ಬಿರುಸಾದ ವಾದ-ವಿವಾದಗಳು ನಡೆದುವು. ಇಂಡಿಯಾ ಸರ್ಕಾರದವರೆಗೆ ದೂರು ಹೋಗಿ ಅವರೊಂದು ವಿಚಾರಣಾ ಸಮಿತಿಯನ್ನು ಗೊತ್ತುಮಾಡಿದರು. ಅಲಹಾಬಾದ್ ಹೈ ಕೋರ್ಟಿನ ನ್ಯಾಯಮೂರ್ತಿಗಳಾಗಿದ್ದ ಸರ್ ಗ್ರಿಮ್‌ವುಡ್ ಮೈಯರ್ ಅವರು ಸಮಿತಿಯ ಅಧ್ಯಕ್ಷರು. ವಿಶ್ವೇಶ್ವರಯ್ಯನವರೂ ಗಣ್ಯ ಸದಸ್ಯರ ಲ್ಲೊಬ್ಬರು. ಈ ಸಮಿತಿಯು ಭಾರತದಲ್ಲಿ ಅನೇಕರ ಸಾಕ್ಷ್ಯ ತೆಗೆದುಕೊಂಡು ದಲ್ಲದೆ, ಲಂಡನ್ನಿಗೆ ಹೋಗಿ ಪಾರ್ಲಿಮೆಂಟ್ ಭವನದಲ್ಲಿ ಲಾರ್ಡ್ ಲಾಯ್ಡ್

ಅವರ ಸಾಕ್ಷ್ಯವನ್ನೂ ತೆಗೆದುಕೊಂಡಿತು. ಈ ಸಮಿತಿಯ ವರದಿಯನ್ನು ಸರ್ಕಾರ ಶ್ಲಾಘಿಸಿ ಒಪ್ಪಿಕೊಂಡಿತು.

೧೯೨೯ ರಲ್ಲಿ ಬೆಂಗಳೂರಿನಲ್ಲಿ ನಡೆದ ಹಿಂದೂ-ಮುಸ್ಲಿಂ ಗಲಭೆಯ ವಿಚಾರಣಾ ಸಮಿತಿಯ ಅಧ್ಯಕ್ಷರಾಗಿದ್ದರು ವಿಶ್ವೇಶ್ವರಯ್ಯನವರು. ಈ ಸಮಿತಿ ಸರ್ಕಾರಕ್ಕೆ ಒಪ್ಪಿಸಿದ ವರದಿಯನ್ನು ಅವಲೋಕಿಸಿದರೆ, ಯಾವ ವಿಷಯವೇ ಆಗಲಿ ಅದನ್ನು ಕೂಲಂಕಷವಾಗಿ, ಸೂಕ್ಷ್ಮವಾಗಿ ಪರಿಶೀಲಿಸುವ ಸ್ವಭಾವ ವಿಶ್ವೇಶ್ವರಯ್ಯನವರದು ಎಂದು ವೇದ್ಯವಾಗದಿರದು. ನಿರುದ್ಯೋಗ, ವಿದ್ಯಾಭ್ಯಾಸ, ಆರ್ಥಿಕ ಪರಿಸ್ಥಿತಿ, ಕಡುಬಡತನ, ಮುಸ್ಲಿಮರಿಗೆ ಪ್ರತ್ಯೇಕ ಶಾಲೆಗಳು, ಪ್ರತ್ಯೇಕ ಮತದಾನ ಪದ್ಧತಿ, ಮಿಲ್ಲರ್ ಸಮಿತಿ, ಇವೆಲ್ಲ ಈ ವರದಿಗೆ ಹಿನ್ನೆಲೆ. ಹಿಂದೂ-ಮುಸಲ್ಮಾನರಲ್ಲಿ ಬೆಳೆಯುತ್ತಿದ್ದ ಅಂತರವನ್ನು ವಿವರಿಸುತ್ತಾ, ಜಗಳ ತಲೆದೋರಿದರೆ, ದೊಣ್ಣೆ ತೆಗೆದುಕೊಂಡು ಮುಸ್ಲಿಂ ಅಲ್ಲಿಗೆ ಧಾವಿಸುತ್ತಾನೆ. ಹಿಂದೂ ಲೇಖನಿ ಹಿಡಿದು ಸರ್ಕಾರಕ್ಕೆ ಮೊರೆಯಿಡುತ್ತಾನೆ ಎಂದಿದ್ದಾರೆ. ಜವಾಬ್ದಾರಿ ಸರ್ಕಾರ ಸ್ಥಾಪನೆಯೇ ಈ ಕಲಹಗಳ ನಿವಾರಣೆಯ ಮದ್ದು ಎಂದು ಸೂಚಿಸಿದ್ದಾರೆ.

ವಿಜ್ಞಾನವೆಂದರೆ ಪಂಚಪ್ರಾಣ ಇವರಿಗೆ. ಪ್ರಪಂಚದ ಮುನ್ನಡೆಗೆ ವಿಜ್ಞಾನವೇ ಆಧಾರ. ೧೯೨೩ ರಲ್ಲಿ ಇವರು ಭಾರತ ವಿಜ್ಞಾನ ಸಮ್ಮೇಳನದ ಅಧ್ಯಕ್ಷರಾಗಿದ್ದರು. ೧೯೨೪ ರಲ್ಲಿ ಭಾರತ ಆರ್ಥಿಕ ಸಮ್ಮೇಳನದ ಅಧ್ಯಕ್ಷರು. ೧೯೩೮ ರಿಂದ ಏಳು ವರುಷಕಾಲ ಬೆಂಗಳೂರು ಟಾಟಾ ವಿಜ್ಞಾನ ಮಂದಿರದ ವ್ಯವಸ್ಥಾಪಕ ಸಮಿತಿಯ ಅಧ್ಯಕ್ಷರಾಗಿದ್ದು, ಬೇರೆ ಯಾರಾದರೂ ಅಧ್ಯಕ್ಷರಾಗಲೆಂದು ೧೯೪೭ ರಲ್ಲಿ ತಾವಾಗಿಯೇ ನಿವೃತ್ತರಾದರು.

ಹೀಗೆ ಇನ್ನೂ ಅನೇಕ ಸಮಿತಿಗಳಲ್ಲಿ ಭಾಗ ವಹಿಸುತ್ತಾ ರಾಜಕೀಯ, ಆರ್ಥಿಕ ಮೊದಲಾದ ದೇಶಾಭ್ಯುದಯ ಕಾರ್ಯಗಳಲ್ಲಿ ನಿರಂತರ ಶ್ರಮಿಸುತ್ತಲೇ ಇದ್ದಾರೆ.

# ರಾಷ್ಟ್ರಾಭ್ಯುದಯ

"ಭಾರತವು ಪರದಾಸ್ಯದಿಂದ ಪಾರಾಗಿ ಸ್ವತಂತ್ರವಾಗಿದೆ. ದೇಶದ ಪ್ರಗತಿಗೆ, ದೇಶಾಭ್ಯುದಯ ಕಾರ್ಯಗಳಿಗೆ ಇದರಿಂದ ಪ್ರಯೋಜನ ವಿಶೇಷ. ಆದರೆ ಈ ಅನುಕೂಲದೊಡನೆಯೇ ಅಪಾಯವೂ ಜವಾಬ್ದಾರಿಯೂ ಸಮ್ಮಿಶ್ರಿತವಾಗಿದೆ.

"ರಾಷ್ಟ್ರಗಳು ತಮ್ಮ ಸ್ವಬಲದಿಂದ ಬೆಳೆಯುತ್ತವೆ. ಯಾವ ರಾಷ್ಟ್ರವೂ ಮತ್ತೊಂದು ರಾಷ್ಟ್ರದ ಆಗುಹೋಗುಗಳನ್ನು ರೂಪಿಸಲಾರದು.

"ರಾಷ್ಟ್ರವನ್ನು ಉತ್ತಮಗೊಳಿಸಬೇಕಾದರೆ, ಅದರಲ್ಲಿನ ಪ್ರಜೆಗಳು ಉತ್ತಮರಾಗಬೇಕು. ಜನಾಂಗ ಶ್ರೇಷ್ಠವಾಗಬೇಕಾದರೆ ಜನತೆ ಶ್ರೇಷ್ಠವಾಗಬೇಕು. ಜಯಶಾಲಿ ರಾಷ್ಟ್ರವೆಂದರೆ ಅಲ್ಲಿಯ ಪ್ರಜಾಬಾಹುಳ್ಯದಲ್ಲಿ ಬಹು ಭಾಗ ದಕ್ಷರಾಗಿ, ಸಚ್ಚರಿತ್ರರಾಗಿ, ತಮ್ಮ ಜವಾಬ್ದಾರಿಯ ಅರಿವುಳ್ಳವರಾಗಿರುತ್ತಾರೆ.

"ಭಾರತವು ಯಾವರೀತಿಯಲ್ಲಿ ದಕ್ಷ ರಾಷ್ಟ್ರವಾದೀತೆಂದು ಅನ್ಯರಾಷ್ಟ್ರಗಳು ಪಾಠ ಹೇಳಿಕೊಡಲಾರವು. ರಾಷ್ಟ್ರದ ನಾಯಕರೂ ಸರಕಾರವೂ ಈ ಹೊಣೆ ಹೊರಬೇಕು

"ಭಾರತೀಯರ ಸರಾಸರಿ ವರಮಾನ ಕಡಮೆಯಾಗುವುದಕ್ಕೆ ಮುಖ್ಯ ಕಾರಣ ಅವರಲ್ಲಿ ನಿಯಮವಿಲ್ಲ, ಕ್ರಮವಿಲ್ಲ, ಶಿಸ್ತು ಸಂಘಟನೆ ಇಲ್ಲ; ಮುಖ್ಯವಾಗಿ ಶಿಕ್ಷಣವಿಲ್ಲ ಅವರದು ಹಿಂದಿನ ಕಾಲದ ಜೀವನ ಕ್ರಮ.

"ಭಾರತೀಯನದು ಆಸಾರಹಿತ, ನಿರುತ್ಸಾಹಿ ಜೀವನ ಹಜ್ಜೆಹೆಜ್ಜೆಗೂ ಕರ್ಮ ಸಿದ್ಧಾಂತ ಅವನನ್ನು ಕಾಡುತ್ತದೆ"

ಮೇಲೆ ಕೊಟ್ಟಿರುವ ವಾಕ್ಯಗಳು ಅವರ ಭಾಷಣದಿಂದ ಆಯ್ದ ಹಲವು ಮುಕ್ತಾ ಫಲಗಳು.

ಮೂವತ್ತು ವರ್ಷಗಳ ಹಿಂದೆ ೧೯೨೦ ರಲ್ಲಿ ತಾವು ಬರೆದು ಪ್ರಕಟಿಸಿದ "ಭಾರತದ ಪುನರುದ್ಧಾರ" (Reconstructing India) ಎಂಬ ಪುಸ್ತಕದಲ್ಲಿ ಎಂಟು ಅಂಶಗಳ 'ಭಾರತೀಯಕರಣದ' ಸೂತ್ರ ಕೊಟ್ಟಿದ್ದಾರೆ ವಿಶ್ವೇಶ್ವರಯ್ಯನವರು. ಇದು ನನ್ನ ನಾಡು ನನ್ನದೇಶ ಎಂಬ ಹಿರಿಮೆ; ಒಂದೇ ರಾಷ್ಟ್ರಭಾಷೆ (ಇಂಗ್ಲಿಷ್); ಆರು ವರ್ಷಗಳ ಕಡ್ಡಾಯ ಪ್ರಾಥಮಿಕ ಶಿಕ್ಷಣ; ಪೌರನೀತಿ ಮತ್ತು ಮಿತವ್ಯಯದ ಅಭ್ಯಾಸ; ಅನವಶ್ಯಕ ಕಂದಾಚಾರಗಳನ್ನು ತೊಡೆದುಹಾಕಿ ಉತ್ತಮ ಸಂಪ್ರದಾಯಗಳನ್ನು ಪೋಷಿಸುವುದು; ಸಾಹಸ ಉದ್ಯಮಶೀಲತೆಗಳ ಪ್ರೋತ್ಸಾಹ; ಸಮವಸ್ತ್ರದ ಬಳಕೆ, ಲೋಕ ಸಂಚಾರ; ದೇಶೋನ್ನತಿಯ ಕಾರ್ಯಗಳಿಗಾಗಿ ಬುದ್ಧಿಪೂರ್ವಕ, ವಿವೇಕಯುತ ದುಡಿಮೆ; ಅಂತರ್ರಾಷ್ಟ್ರೀಯ ವಿಷಯಗಳಲ್ಲಿ ಆಸಕ್ತಿ.

ಭಾರತದ ಕಲ್ಯಾಣಕ್ಕಾಗಿ ಅಭ್ಯುದಯಕ್ಕಾಗಿ ಅವರು ಈಗ ಹೇಳುವುದೂ ಅದೇ. ಆದರೆ ದೇಶದ ಪರಿಸ್ಥಿತಿಯನ್ನನುಸರಿಸಿ, ಕಾಲಕ್ಕನುಗುಣವಾಗಿ ಸಹಜವಾದ ಬದಲಾವಣೆ ಈಗಿನ ಮಾತಿನಲ್ಲಿ ತೋರಿಬರುತ್ತದೆ. ಈಗ ಅವರು ಹೇಳುವುದಾದರೂ ಏನು—ದುಡಿ, ಮೈಮುರಿದು ದುಡಿ, ಹೆಚ್ಚು ಹೆಚ್ಚಾಗಿ ದುಡಿ; ದುಡಿಮೆಯಲ್ಲಿ ಕ್ರಮವಿರಲಿ, ನಿಯಮವಿರಲಿ, ಗುರಿಯಿರಲಿ, ವಿವೇಚನೆಯಿರಲಿ; ದುಡಿಮೆಯಲ್ಲಿ ದಕ್ಷತೆಯಿರಲಿ, ದಕ್ಷತೆ ಹೆಚ್ಚಿದಂತೆ ಪ್ರತಿಫಲವೂ ಹೆಚ್ಚು ಎಂಬ ತಿಳಿವಳಿಕೆಯಿರಲಿ; ದುಡಿಮೆಯಲ್ಲಿ ಸೌಮನಸ್ಯವಿರಲಿ, ಸೇವಾ ಸಹಕಾರ ಭಾವನೆಯಿರಲಿ.

ಜಿಲ್ಲೆ ಜಿಲ್ಲೆಗೂ ಕಾಲೇಜು ಬೇಕೆನ್ನುತ್ತಾರೆ ಜನ. ಆದರೆ 'ಆರ್ಟ್ಸ್' ಕಾಲೇಜಿಗಿಂತ ಒಂದೊಂದು 'ವರ್ಕಷಾಪ್' ಆದರೆ ಎಷ್ಟೋ ಮೇಲು, ಉತ್ತಮ ಎನ್ನುತ್ತಾರೆ ವಿಶ್ವೇಶ್ವರಯ್ಯನವರು.

"ಸುಖ ಭೋಗದ ಮನೋಧರ್ಮ ರಾಷ್ಟ್ರದ ವಿನಾಶಕ್ಕೆ ಮೊದಲ ಹೆಜ್ಜೆ. ಈ ಭಾವನೆ ತಲೆದೋರುತ್ತಲೇ ದೇಶ ನಿರ್ಜೀವಿಯಾಗುತ್ತದೆ. ನಾವು ಎಚ್ಚರವಾಗಿರಬೇಕಾದರೆ ಏನಾದರೂ ಅಪಾಯಗಳು, ಭಯಂಕರ ಸನ್ನಿವೇಶಗಳು ತಲೆಹಾಕುತ್ತಲೇ ಇರಬೇಕು. ಹೀಗಾದರೆ ಮಾತ್ರ ಮುಂಬರಿಯಲು ಅವಿಶ್ರಾಂತ ದುಡಿಮೆಗೆ ನಾವು ಟೊಂಕ ಕಟ್ಟುತ್ತೇವೆ. ಆಧುನಿಕ

ಕಾಲಕ್ಕನುಗುಣವಾಗಿ ನಮ್ಮ ಪೂರ್ವ ಪದ್ಧತಿಗಳಲ್ಲಿ ಪರಿವರ್ತನೆಯಾಗ ಬೇಕು. ಅದಕ್ಕೆ ಮೊದಲ ಹೆಜ್ಜೆ ಜಾತೀಯತೆಯನ್ನು ತೊಡೆದು ಹಾಕುವುದು. ಭಂಗಾರವಲ್ಲ, ಬೆಳ್ಳಿಯಲ್ಲ ನಮ್ಮ ಐಶ್ವರ್ಯ. ನಮ್ಮ ಜನಶಕ್ತಿಯೇ ನಮ್ಮ ಐಶ್ವರ್ಯ ಪ್ರತಿಯೊಬ್ಬನ ಮನೋಭಾವನೆ, ಉದಾತ್ತ ಧ್ಯೇಯ ಇವುಗಳ ಸಾಧನೆಗೆ ಪಡುವ ಶ್ರಮವನ್ನನುಸರಿಸಿದೆ ದೇಶದ ಪ್ರಗತಿ, ನಾಗರಿಕತೆ."

ಈ ಮಾತುಗಳನ್ನಾಡಿರುವುದು ಪ್ರಧಾನಿ ನೆಹರು.

"ಮೈಸೂರಿನ ಐಶ್ವರ್ಯ ಅದರ ಚಿನ್ನ ಬೆಳ್ಳಿಯಲ್ಲ ದೇಶದಲ್ಲಿರುವ ಕೆರೆ ಕಟ್ಟೆ ನಾಲೆ ಕೈಗಾರಿಕೋದ್ಯಮಗಳಲ್ಲಿ ಹುದುಗಿದೆ ಅದರ ಐಶ್ವರ್ಯ" ಎನ್ನುತ್ತಾರೆ ವಿಶ್ವೇಶ್ವರಯ್ಯನವರು.

ಮಹಾ ವ್ಯಕ್ತಿಗಳ ಮನೋಧರ್ಮ ಅನೇಕ ವಿಷಯಗಳಲ್ಲಿ ಒಂದೇ ಆಗಿರುತ್ತದೆ ಎಂಬುದಕ್ಕೆ ಇದೊಂದು ನಿದರ್ಶನ.

"ಅನ್ನದ ಅಭಾವ, ಕಮ್ಯೂನಿಸಂ – ಸೋಷಿಯಲಿಸಂ ಮೊದಲಾದ ಆರ್ಥಿಕ ಕಲ್ಪನೆಗಳು; ಆಟಂ ಬಾಂಬ್, ಹೈಡ್ರೋಜನ್ ಬಾಂಬ್ ಮೊದಲಾದ ಭಯಂಕರ ವಿನಾಶಕಾರಕ ಸಾಧನಗಳು ವಿಚಾರಪರರ ತಲೆ ಕೆಡಿಸದಿರುವುದಿಲ್ಲ. ಭರತ ವರ್ಷದ ಜನ ಮಾತ್ರವಲ್ಲ, ಮಾನವ ಸಮೂಹವೇ ಈ ಐವತ್ತು ವರುಷಗಳಲ್ಲಿ ಅನಿರೀಕ್ಷಿತ ಭಯ ಭೀತಿಗಳ ದವಡೆಯಲ್ಲಿ ಸಿಕ್ಕಿ ತತ್ತರಿಸುತ್ತಿದೆ. ವಿಜ್ಞಾನದ ಮುಂದೋಟ, ರಾಜಕೀಯ ಮತ್ತು ಆರ್ಥಿಕ ಕಲ್ಪನೆಗಳ ಬದಲಾವಣೆ ಇವುಗಳಿಂದ ಜಗತ್ತಿನ ಸಮಸ್ಯೆಗಳ ನಿವಾರಣೆಗೆ ಶಾಶ್ವತವೆನ್ನ ಬಹುದಾದ ಯಾವ ಸಲಹೆಯನ್ನೂ ಸದ್ಯ ಕೊಡಲು ಸಾಧ್ಯವಾಗದು. ಇರುವ ಮಾರ್ಗವೊಂದೇ—ಅನ್ವೇಷಣ. ದಿನಕಳೆದಂತೆ ಪರಿಸ್ಥಿತಿಯನ್ನು ಪರಿಶೀಲಿ ಸುತ್ತಿರುವುದು"

ಹೊಟ್ಟೆಗಾಗಿ ಮನುಷ್ಯನೋ? ಮನುಷ್ಯನಿಗಾಗಿ ಹೊಟ್ಟೆಯೋ? ಇದಕ್ಕೆ ಉತ್ತರ ತಿಳಿದೇ ಇದೆ. ದುಡಿದು ಉಣಬೇಕು ದುಡಿತಕ್ಕೆ ತಕ್ಕಫಲ ಎಂಬುದನ್ನು ಪ್ರತಿಯೊಬ್ಬ ಭಾರತೀಯನೂ ಚೆನ್ನಾಗಿ ಅರ್ಥಮಾಡಿಕೊಳ್ಳ ಬೇಕು. ಸುಖವನ್ನು ಬೆನ್ನಟ್ಟಿ ಹೋಗುವವನು ಹಳ್ಳಕ್ಕೆ ಬೀಳುತ್ತಾನೆ.

ಹೊಟ್ಟೆಬಾಕತನವೇ ಕೆಲವರಿಗೆ ಒಂದು ಕಲೆ ಒಬ್ಬ ಒಂದು ಬಳ್ಳ ಅಕ್ಕಿಯ ಅನ್ನ ಒಪ್ಪತ್ತಿಗೆ ಊಟ ಮಾಡುತ್ತಿದ್ದನಂತೆ, ಆತನನ್ನು ಒಬ್ಬ ದೊಡ್ಡ ವ್ಯಕ್ತಿ ಕರೆದು—"ಏನಯ್ಯ, ನೀನೊಬ್ಬನೇ ನಾಲ್ಕು ಜನರ ಊಟ ಮಾಡುತ್ತೀಯಂತೆ. ನಾಲ್ವರ ಕೆಲಸವನ್ನೂ ನೀನು ಮಾಡಬಲ್ಲೆಯೋ" ಎಂದು ಕೇಳಿದರಂತೆ. ಅದಕ್ಕೆ ಉತ್ತರವೇ ಬರಲಿಲ್ಲ.

ನಾಟಕದಲ್ಲಿ ವಿದೂಷಕ ಹೊಟ್ಟೆಬಾಕತನದಿಂದ "ಉಪ್ಪಿನಕಾಯಿ ಚಪ್ಪರಿಸಿ ಎಷ್ಟತ್ತಾದರೂ ನುಂಗುವೆನು" ಎಂದು ಎಲ್ಲರನ್ನೂ ನಗಿಸುತ್ತಾನೆ ಏನು ಆನಂದ !

"ಇಂದ್ರಿಯಗಳನ್ನು ನಿಗ್ರಹಿಸದವನ ಮುಖದ ಮೇಲಿನ ವರ್ಚಸ್ಸೇ ಒಂದು ಬಗೆ ಇಂದ್ರಿಯಗಳನ್ನು ಜಯಿಸದೆ, ಅಧೀನದಲ್ಲಿರಿಸಿಕೊಳ್ಳದೆ, ಯಾರೂ ಮಹಾತ್ಮನಾಗಲಾರನು. ಇದು ಕನಿಷ್ಠ, ನಿರ್ವಿವಾದ ಆವಶ್ಯಕತೆ· ಮಾನವನು ದೇವನಾಗುವುದಕ್ಕೆ, ದೊಡ್ಡವನಾಗುವುದಕ್ಕೆ."

ಆಧ್ಯಾತ್ಮಿಕ ವಿಚಾರಗಳಲ್ಲಿ ವಿಶ್ವೇಶ್ವರಯ್ಯನವರ ಆಸಕ್ತಿ ಕಡಮೆ ಎಂದು ಜನ ಭಾವಿಸುತ್ತಾರೆ ಅವರ ಭಾಷಣಗಳಲ್ಲಿಯೂ ಪಾರಮಾರ್ಥಿಕ ವಿಚಾರಗಳು ವಿರಳ. ಆದರೆ ಮೇಲ್ಕಂಡ ಅವರ ನುಡಿ ಭಗವದ್ಗೀತೆಯ ಎರಡನೆಯ ಅಧ್ಯಾಯದ ಸ್ಥಿತಪ್ರಜ್ಞನ ಗುಣವರ್ಣನೆಗೆ ಎಷ್ಟು ಚೆನ್ನಾಗಿ ಹೊಂದಿಕೊಳ್ಳುತ್ತದೆ ನೋಡಿ.—

ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ ।
ವೀತರಾಗಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ॥

ಭಾರತ ಈಗ ಸ್ವತಂತ್ರವಾಗಿದೆ. ಇದುವರೆಗೆ ಭಾರತದ ರಕ್ಷಣೆಯ ಜವಾಬ್ದಾರಿ ಬ್ರಿಟಿಷರದಾಗಿತ್ತು. ಇನ್ನು ಹಾಗಲ್ಲ. ಭಾರತ ತನ್ನ ರಕ್ಷಣೆ ಯನ್ನು ತಾನೇ ಮಾಡಿಕೊಳ್ಳಬೇಕು. ಭೂ, ನೌಕಾ ವಾಯುದಳಗಳೆಲ್ಲವೂ ಭಾರತೀಯವಾಗಬೇಕು ಸೈನ್ಯ ಶಾಖೆಗೆ ಬೇಕಾಗುವ ಜಹಜು, ಜಲಾಂತ ರ್ಗತ ನೌಕೆ, ವಿಮಾನ, ಟ್ಯಾಂಕ್, ಮದ್ದು ಗುಂಡು ಎಲ್ಲವೂ ಇಲ್ಲಿಯೇ ನಿರ್ಮಾಣವಾಗಬೇಕು. ಪರಾವಲಂಬನೆ ಕ್ಷೇಮವಲ್ಲ. ಈ ಸಾಧನಗಳನ್ನು ತಯಾರಿಸಲು ದೊಡ್ಡ ದೊಡ್ಡ ಕೈಗಾರಿಕೆಗಳು ಬೇಕಾಗುತ್ತವೆ. ಈಗಿನದು

ಯಾಂತ್ರಿಕಯುದ್ಧ. ಶಸ್ತ್ರಾಸ್ತ್ರಗಳ ಪ್ರಾಬಲ್ಯ ಬಹಳ. ಪರಸ್ಪರ ಪೂರಕವಾದ ದೊಡ್ಡ ಯಂತ್ರೋದ್ಯೋಗಗಳಿಲ್ಲದ ರಾಜ್ಯ ಆಧುನಿಕಕಾಲದಲ್ಲಿ ಸ್ವತಂತ್ರವಾಗಿ ಬಾಳದು. ತನ್ನ ಸ್ವಾತಂತ್ರ್ಯದ ಹರಣ ಮಾಡಲು ಹವಣಿಸುವ ರಾಜ್ಯವನ್ನು ಪ್ರತಿಭಟಿಸಲು ಭಾರತ ಸದಾ ಸಿದ್ಧವಿರಬೇಕು. ತಮ್ಮ ತಮ್ಮೊಳಗೆ ಭಾರತೀಯರು ಅಹಿಂಸಾವಾದಿಗಳಾಗಿರಲಿ, ಚಿಂತೆಯಿಲ್ಲ. ಆದರೆ ಪರಶತ್ರುಗಳ ಧಾಳಿಯಿಂದ ದೇಶವನ್ನು ರಕ್ಷಿಸಲು ಸರ್ವದಾ ಸಿದ್ಧವಿರಬೇಕು. ಪ್ರಪಂಚದಲ್ಲಿ ಇಷ್ಟು ರಾಷ್ಟ್ರಗಳು ಸುಸಜ್ಜಿತವಾಗಿರುವಾಗ, ತಾನು ಮಾತ್ರ ನಿರಾಯುಧವಾಗಿರುವುದು ದುರಾಕ್ರಮಣಕ್ಕೆ ವೀಳಯೆ ವಿತ್ತಂತೆ.

ಆಧುನಿಕ ಯಾಂತ್ರಿಕ ಯುಗದಲ್ಲಿ ಸೈನ್ಯದ ಶಕ್ತಿಯು ಸೇನಾಧಿಕಾರಿಗಳ ಬುದ್ಧಿಶಕ್ತಿಯಲ್ಲಿದೆ, ಬಾಹು ಬಲದಲ್ಲಲ್ಲ. ಆದ್ದರಿಂದ ಎಲ್ಲ ಜಾತಿಮತ ಪಂಗಡದಿಂದಲೂ ಮೇಧಾವಿಗಳಾದ ತರುಣರಿಗೆ ಸೈನ್ಯಾಧಿಕಾರಿಗಳಾಗಲು ತಕ್ಕ ಶಿಕ್ಷಣ ಕೊಡಬೇಕು. ಸೇನಾ ಶಿಕ್ಷಣ ಶಾಲೆಗಳು ಸ್ಥಾಪಿತವಾಗಬೇಕು. ಜವಾಬ್ದಾರರಾದ ನಿಜ ದೇಶಭಕ್ತರನ್ನು ಆರಿಸಿ ಸೈನ್ಯಾಧಿಕಾರಿಗಳನ್ನಾಗಿ ಮಾಡಬೇಕು.

ಇದುವರೆಗೆ ಸೈನ್ಯ ಶಾಖೆಗೂ, 'ಸಿವಿಲ್' ಅಥವಾ ಅ-ಸೈನಿಕರಿಗೂ ಹೆಚ್ಚು ಸಂಪರ್ಕವಿಲ್ಲ. ಈಗಲಾದರೂ ಜನ ಸಾಮಾನ್ಯರೂ ಶಸ್ತ್ರಾಸ್ತ್ರಗಳ ಬಳಕೆಯನ್ನು ತಕ್ಕಮಟ್ಟಿಗೆ ಅರಿಯಬೇಕು. ಶಸ್ತ್ರಾಸ್ತ್ರಗಳ ಪ್ರದರ್ಶನಗಳನ್ನು ಆಗಾಗ ನಡೆಸುತ್ತಾ ಅಸೈನಿಕ ಜನರ ಆಸಕ್ತಿ ಹೆಚ್ಚಿಸಬೇಕು.

ವಾಹನ ಸಂಚಾರಕ್ಕೆ ಅತ್ಯಗತ್ಯವಾದುದು ಪೆಟ್ರೋಲ್ ಮತ್ತು ಸೀಮೆ ಯೆಣ್ಣೆ. ನಮ್ಮ ದುರದೃಷ್ಟ! ಭಾರತದಲ್ಲಿ ಪೆಟ್ರೋಲ್ ಉತ್ಪತ್ತಿಯಾಗುವುದಿಲ್ಲ. ಯುದ್ಧ ಸಂಭವಿಸಿದಲ್ಲಿ ನಮಗೆ ಪೆಟ್ರೋಲ್ ಮತ್ತು ಎಣ್ಣೆಯ ಸರಬರಾಜು ನಿಂತು ಹೋಗುವುದು ಖಂಡಿತ. ಇದರಿಂದ ಮೋಟಾರು, ವಿಮಾನಗಳ ಸಂಚಾರ ಪೂರ್ಣವಾಗಿ ನಿಂತು, ವಾಹನ ವ್ಯವಸ್ಥೆ ಕುಸಿದುಬೀಳುವುದರಲ್ಲಿ ಸಂದೇಹವಿಲ್ಲ ಪೆಟ್ರೋಲಿನ ಅಭಾವವೇ ಮಹಾ ಯುದ್ಧದಲ್ಲಿ ಜರ್ಮ ಶರಣಾಗತವಾಗಲು ಮುಖ್ಯಕಾರಣ. ಈ ಕೊರತೆಯನ್ನು ನಿವಾರಿಸಲು ಈಗಿನಿಂದಲೂ ಸರಕಾರ ಪ್ರಯತ್ನಿಸಬೇಕು.

ಕಾಂಗ್ರೆಸ್ ಸರಕಾರ ಅಧಿಕಾರ ಬರುತ್ತಲೇ ತನ್ನ ಹಲವಾರು ಧ್ಯೇಯಗಳನ್ನು ಸಾಧಿಸಲು ಹೊರಟಿದೆ. ಯಂತ್ರದ ಬಳಕೆಯಿಂದ ಭೂ-ಸಾಗುವಳಿ ನಡೆಸಿ, ಹೆಚ್ಚು ಆಹಾರ ಬೆಳೆಯುವ ಪ್ರಯತ್ನ ಮಾಡುತ್ತಿರುವುದು ಅಭಿನಂದನೀಯ. ಕೃತಕ ಗೊಬ್ಬರದ ತಯಾರಿಕೆಗೆ ಸಿಂಧ್ರಿಯಲ್ಲಿ ಏಷ್ಯಾದಲ್ಲೇ ಅತ್ಯಂತ ದೊಡ್ಡದಾದ ಕೈಗಾರಿಕೆ ಸ್ಥಾಪಿತವಾಗಿದೆ ಆದಷ್ಟು ತೀವ್ರವಾಗಿ ಇಲ್ಲಿರುವ ಪರದೇಶೀಯ ತಜ್ಞರ ಸ್ಥಾನಗಳನ್ನು ಭಾರತೀಯರೇ ವಹಿಸಿಕೊಳ್ಳಬೇಕು. ದೊಡ್ಡದೊಡ್ಡ ಕೈಗಾರಿಕೆಗಳನ್ನು ಸ್ಥಾಪಿಸುವ ಪ್ರಯತ್ನ ಇನ್ನೂ ಹೆಚ್ಚು ತೀವ್ರಗತಿಯಿಂದ ಮುಂಬರಿಯಬೇಕು.

ಮೂಲ ಕೈಗಾರಿಕೆಗಳನ್ನು ಹತೋಟಿಗೆ ತೆಗೆದುಕೊಳ್ಳುವುದು ತನ್ನ ಧ್ಯೇಯವೆಂದು ಕಾಂಗ್ರೆಸ್ ಸರಕಾರ ತಿಳಿಸಿದೆ. ರಾಷ್ಟ್ರೀಯಕರಣಕ್ಕೆ ಇದು ಸಕಾಲವಲ್ಲ. ಖಾಸಗೀ ಉದ್ಯಮಕ್ಕೆ, ಪ್ರಯತ್ನಕ್ಕೆ ಈಗ ಯಾವ ಅಡಚಣೆಯನ್ನೂ ತರಬಾರದು. ಪ್ರೋತ್ಸಾಹ ಹೆಚ್ಚಿಸಬೇಕು. ದೇಶದಲ್ಲಿ ಸಾಕಷ್ಟು ಕೈಗಾರಿಕೆಗಳು ಬೆಳೆದಿಲ್ಲ. ರಾಷ್ಟ್ರೀಯಕರಣ ಭೀತಿಯಿಂದ ಖಾಸಗೀ ಬಂಡವಾಳ ಹೊರಕ್ಕೆ ಬಾರದೇ ಹೋದೀತು. ಖಾಸಗಿ ಪ್ರಯತ್ನಕ್ಕೆ, ಉದ್ಯಮಕ್ಕೆ ರಾಷ್ಟ್ರೀಯಕರಣದಿಂದ ಊನವಾಗುವುದರಲ್ಲಿ ಸಂದೇಹವಿಲ್ಲ. ಷೇರು ಬಂಡವಾಳದ ಮೇಲೆ ಲಾಭಾಂಶವನ್ನು ಮಿತಿಗೊಳಿಸಬೇಕೆಂಬ ಶಾಸನವನ್ನು ಈಗ ಜಾರಿಗೆ ತಾರದಿರುವುದೇ ಲೇಸು

ಹಣದ ಮುಗ್ಗಟ್ಟು ವಿಪರೀತವಾಗಿರುವಾಗ ಪಾನನಿರೋಧವನ್ನು ರೂಢಿಗೆ ತರುವ' ಪ್ರಯತ್ನ ಮಾಡುವುದು ಈಗ ಒಳಿತೇ ಎಂದು ತೀವ್ರಾಲೋಚನೆ ನಡೆಸಬೇಕು. ಲಕ್ಷಾಂತರ ಜನ ಹೊಟ್ಟೆಗಿಲ್ಲದೆ ಪೇಚಾಡುತ್ತಿರುವಲ್ಲಿ, ಪಾನನಿರೋಧವನ್ನು ಸ್ವಲ್ಪಕಾಲ ಮುಂದೆ ಹಾಕುವುದು ಸಾಧುವೆಂದು ತೋರುತ್ತದೆ. ಅಂತೆಯೇ ಉಪ್ಪಿನಕರದ ಮಾತೂ.

ನಮ್ಮ ದೇಶದಲ್ಲಿ ಬಹುಜನ ಹೊಟ್ಟೆಗಿಲ್ಲದೆ ಪರಿತಪಿಸುತ್ತಿರುವಾಗ, ವಿದ್ಯಾವಿಹೀನರಾಗಿರುವಾಗ ಈ ಭಾವನಾವಿಶಿಷ್ಟ ಕಾರ್ಯಕ್ರಮಗಳನ್ನು ಮುಂದೆ ಹಾಕುವುದೇ ಉತ್ತಮ.

# ಮೋಕ್ಷಗುಂಡಂ ಅವರ ವ್ಯಕ್ತಿತ್ವ

ವಿಶ್ವೇಶ್ವರಯ್ಯನವರು ಜನ್ಮತಾಳಿದ್ದು ೧೫ ಸೆಪ್ಟಂಬರ್ ೧೮೬೧ ರಲ್ಲಿ. ಈಗ ಅವರಿಗೆ ೯೨ ವರ್ಷ. ಹಣ್ಣು ಹಣ್ಣು ಮುದುಕ ಎನ ಬೇಡಿ. ಮುದುಕ ಎಂದರೆ ಅವರು ಸಿಟ್ಟಾಗುತ್ತಾರೆ. ವಯಸ್ಸಿನಲ್ಲಿ ವೃದ್ಧರು, ಮನಸ್ಸಿನಲ್ಲಿ, ಕಾರ್ಯದಲ್ಲಿ ತರುಣರು.

"ನಾನು ಮೆಟ್ಟಲು ಇಳಿಯುತ್ತಿದ್ದರೆ, ಸ್ನೇಹಭಾವದಿಂದ ನನ್ನ ಕೈ ಹಿಡಿದು ಇಳಿಸಲು ಬರುತ್ತಾರೆ. ಊಟ ಮಾಡಲು ಕುಳಿತರೆ ಕೈ ನಡುಗು ವುದಿಲ್ಲವೇ ಎಂದು ಕೇಳುತ್ತಾರೆ. ವಯಸ್ಸು ಮೀರಿದವರು ಇಂಥಾ ಅಪ ಮಾನಕರವಾದ ಮಾತುಗಳನ್ನು ಮರುಮಾತಿಲ್ಲದೆ ಕಿವಿಯಾರೆ ಕೇಳಬೇಕಾದ್ದು ಅವರ ದೌರ್ಭಾಗ್ಯ"

ಭಾರತದ ಸರಾಸರಿ ವಯೋಮಾನ ೨೮. ಅರವತ್ತು ಮುಟ್ಟಿದರೆ ಅದೊಂದು ವಿಶೇಷ. ಷಷ್ಠ್ಯಿಪೂರ್ತಿ ಶಾಂತಿ ಸಂಭ್ರಮವೇ ನಡೆಯುತ್ತದೆ. ಇಷ್ಟು ಕಾಲ ಜೀವಂತವಾಗಿದ್ದುದಕ್ಕೆ ದೇವತೆಗಳಿಗೆ ಕೃತಜ್ಞತೆಯ ಸಮರ್ಪಣೆ. ಎಪ್ಪತ್ತು ಮುಟ್ಟಿದರೆ ಅದೊಂದು ಅಚ್ಚರಿ ಎಂಭತ್ತು ಮುಟ್ಟಿದರೆ 'ಮ್ಯೂಸಿಯಂ' ನಲ್ಲಿರಿಸಲು ಯೋಗ್ಯವಾದ ವಿಚಿತ್ರ ಪ್ರಾಣಿ; ನೂರಾದಂತೆಯೇ ! 'ಶತಾಯುಷಂ ಭವತಿ'

ವಿಶ್ವೇಶ್ವರಯ್ಯನವರಿಗೆ ೯೦ ಮೀರಿರುವುದು ಮಾತ್ರವಲ್ಲ ಈ ವಯಸ್ಸಿನಲ್ಲಿಯೂ ಅವರು ಆರೋಗ್ಯವಂತರಾಗಿ ಲವಲವಿಕೆಯಿಂದ ಇದ್ದಾರೆ. ಎಂದಿನಂತೆಯೇ ತಮ್ಮ ದಿನಚರಿಯ ಕಾರ್ಯಕ್ರಮಗಳನ್ನು ನಿಯಮಿತ ರೀತಿ ಯಲ್ಲಿ ಕ್ಷಣವೂ ಮೀರದೆ-"ನಹಿ ಕ್ಷಣಮಪಿ ಜಾತುತಿಷ್ಠತಿ ಅಕರ್ಮಕೃತ್" ಎಂಬ ಗೀತಾವಾಕ್ಯದಂತೆ, ಕ್ಷಣವೂ ಬಿಡುವಿಲ್ಲದೆ ಬೇಸರವೆನ್ನದೆ ದುಡಿಯು ತ್ತಾರೆ. ಮದರಾಸ್, ಬೊಂಬಾಯಿ, ಕಲ್ಕತ್ತ, ದೆಹಲಿಗಳಿಗೆ ರೈಲು—ವಿಮಾನ—ಮೋಟಾರುಗಳಲ್ಲಿ ಸಂಚರಿಸುತ್ತಾರೆ ಸಭೆಗಳಲ್ಲಿ ಕುಳಿತಲ್ಲ,

ನಿಂತುಕೊಂಡೇ ಮಾತನಾಡುತ್ತಾರೆ ಕಿವಿ ಸ್ವಲ್ಪ ಮಂದ. ಕಣ್ಣುಗಳು ಜಿಂಕೆಯ ಕಣ್ಣಿನಂತೆ ಪ್ರಕಾಶಮಾನವಾಗಿ ಥಳಥಳಿಸುತ್ತದೆ ಇಂದಿಗೂ ಕನ್ನಡಕವಿಲ್ಲದೆ ಓದುತ್ತಾರೆ. ನಿರಾಯಾಸವಾಗಿ ದಿನವೂ ಎರಡು ಮೂರು ಮೈಲಿ ನಡೆಯುತ್ತಾರೆ. ಜ್ಞಾಪಕಶಕ್ತಿ ಕೆಟ್ಟಿಲ್ಲ. 'ಅರವತ್ತಕ್ಕೆ ಅರುಳು ಮರುಳು' ಎಂಬ ಗಾದೆಯನ್ನು ಸುಳ್ಳು ಮಾಡಿದ್ದಾರೆ.

ಅಮೆರಿಕದಲ್ಲಿ ಹೆಂಗಸಿನ ಸರಾಸರಿ ವಯಸ್ಸು ೬೩, ಗಂಡಸಿನದು ೬೧. ಎಪ್ಪತ್ತು ತುಂಬಿದರೂ ಅವರು ಜವಾಬ್ದಾರಿಯ ಕೆಲಸಗಳನ್ನು ನಿರ್ವಹಿಸಿ ಕೊಂಡು ಬರುತ್ತಾರೆ ಇಂಗ್ಲೆಂಡಿನಲ್ಲೂ ಹೀಗೆಯೇ.

ಇಷ್ಟು ದೀರ್ಘಕಾಲದ ಬಾಳ್ವೆಯ ಗುಟ್ಟೇನು ಎಂದು ವಿಶ್ವೇಶ್ವರಯ್ಯ ನವರನ್ನು ಕೇಳಿದರೆ—"ವೃದ್ಧಾಪ್ಯ ನನ್ನನ್ನು ಭೇಟಿ ಮಾಡಲು ಬಂದಿತ್ತು. ಬಂದಾಗಲೆಲ್ಲ, ನಾನು ಮನೆಯಲ್ಲಿಲ್ಲ ಎಂದು ಹೇಳಿ ಕಳುಹಿಸುತ್ತಿದ್ದೇನೆ—" ಎಂದು ಹಾಸ್ಯವಾಗಿ ಉತ್ತರಿಸಿದ್ದಾರೆ. ಬಿಡುವಿಲ್ಲದ ದುಡಿತ; ನಿಯಮಿತ ಕಾರ್ಯಕ್ರಮ, ವ್ಯಾಯಾಮ, ಮಿತಾಹಾರ, ಸಂಯಮ ಇವು ಸಾಧಕಗಳು. ಜೊತೆಗೆ ದೇವರ ಕೃಪೆ, ಆಶೀರ್ವಾದ.

'ವಯೋವೃದ್ಧ ಜೀವನದಲ್ಲಿ ಸುಖವಿದೆಯೇ ?' ಎಂದು ಕೇಳಿ ನೋಡಿ ಅವರನ್ನು. ಸಾಕಷ್ಟು ಆರೋಗ್ಯ, ಯೋಗ್ಯ-ಸುಖಜೀವನಕ್ಕೆ ತಕ್ಕಷ್ಟು ಹಣ ಇದ್ದರೆ ಏಕಾಗಬಾರದು ಎಂದು ನುಡಿಯುತ್ತಾರೆ. ಕಾಯಿಲೆಯಿಂದ, ನೋವಿನಿಂದ ಪೇಚಾಡುವ ಜೀವ ಸುಖಮಯವಾಗಿರಲಾರದು. ಜೀವನವೇ ಒಂದು ಹೋರಾಟ, ಕಷ್ಟಮಯ ಸಂಗ್ರಾಮ. ಆದರೆ ಈ ಕಷ್ಟಕಾರ್ಪಣ್ಯ ಗಳನ್ನು ಎದುರಿಸುವ ಶಕ್ತಿಯನ್ನು ಪರಮಾತ್ಮ ಎಲ್ಲರಿಗೂ ಅನುಗ್ರಹಿಸಿದ್ದಾನೆ- ಎನ್ನುತ್ತಾರೆ.

ಇವರು ಶಾಲೆಯಲ್ಲಿ ಓದುತ್ತಿದ್ದಾಗ ೩೦ ವರ್ಷಗಳಿಗಿಂತ ಹೆಚ್ಚು ಕಾಲ ನೀನು ಜೀವಿಸಲಾರೆ ಎಂದು ಉಪಾಧ್ಯಾಯರೊಬ್ಬರು ಹಾಸ್ಯಮಾಡು ತ್ತಿದ್ದರಂತೆ. ದೇಹ ಅಷ್ಟು ತೆಳು, ಕೃಶ. ಇಷ್ಟು ಶಕ್ತಿ ಸಾಮರ್ಥ್ಯ ಎಲ್ಲಿಂದ ಬಂತು, ತುಣುಕು ಆಹಾರ ಉಣುವ ಈ ಕೃಶದೇಹಕ್ಕೆ ಎಂದು ಅಚ್ಚರಿ

ಯಾಗುತ್ತವೆ. ಇವರು ಎಷ್ಟೋ ಬಾರಿ ಪಾಶ್ಚಿಮಾತ್ಯ ದೇಶಗಳಿಗೆ ಹೋಗಿ ಬಂದರು. ಆದರೂ ಮಾಂಸಾಹಾರ, ಕುಡಿತ ಮೊದಲಾದ ದುರಭ್ಯಾಸಗಳನ್ನು ಕಲಿಯಲಿಲ್ಲ. ವಿದೇಶ ಸಂಚಾರದಲ್ಲಿರುವಾಗ ಬೇಯಿಸಿದ ಶಾಖಾಹಾರ ದೊರೆಯದಿದ್ದರೆ, ಕೇವಲ ಹಣ್ಣು ಹಾಲಿನಿಂದಲೇ ತೃಪ್ತರಾಗುತ್ತಿದ್ದರು. ಸಿಗರೇಟಿನ ಚಟವೂ ಇಲ್ಲ.

ಹೀಗೆಂದು ದೇಹಶಕ್ತಿಯೇನಾದರೂ ಕಡಮೆಯಾಗಿದೆಯೇ ? ತಮ್ಮ ೫೩ನೆ ವಯಸ್ಸಿನಲ್ಲಿ ೩೫ ನಿಮಿಷದಲ್ಲಿ ನಂದಿ ಬೆಟ್ಟ ಹತ್ತಿ ಹೋಗುತ್ತಿದ್ದರಂತೆ. ೭೩ನೆ ವಯಸ್ಸಿನಲ್ಲಿ ಅದೇ ಬೆಟ್ಟ ಹತ್ತಲು ४೫ ನಿಮಿಷಗಳು ಬೇಕಾದುವು. ಅನೇಕರು ಈ ವಯಸ್ಸಿನಲ್ಲಿ ಒಂದು ಮೆಟ್ಟಲು ಸಹ ಹತ್ತಲಾರರು. ನಡಿಗೆಯೂ ಹಾಗೆಯೇ ಅತಿ ವೇಗ—ಮಹಾತ್ಮ ಗಾಂಧಿಯವರಂತೆ ಅನೇಕ ತರುಣರೂ ಸಹ ಜೊತೆಯಲ್ಲಿ ನಡೆಯಲಾಗದೆ ಓಡುವರು. ಮೋಟಾರಿನಲ್ಲಿ ಊರಿನಾಚೆ ಹೋಗಿ ಒಳ್ಳೆ ಗಾಳಿಯಿರುವಲ್ಲಿ ತೀವ್ರಗತಿಯಲ್ಲಿ ನಡೆಯುವುದು ಅವರ ವ್ಯಾಯಾಮ. ಅವರು ನಡೆದು ಹೋಗುತ್ತಿದ್ದರೆ ಅನತಿ ದೂರದಲ್ಲಿ ಅವರನ್ನು ಹಿಂಬಾಲಿಸಿ ಬರೀ ಮೋಟಾರು ಬರುತ್ತಿರುವುದು ಒಂದು ಸಾಮಾನ್ಯ ದೃಶ್ಯ. ಬಹಳ ಜವಾಬ್ದಾರಿಯ ಕಾಗದ ಪತ್ರಗಳನ್ನು ನೋಡಬೇಕಾದಾಗ ಗಲಾಟೆಯಿಲ್ಲದ ಪ್ರದೇಶಕ್ಕೆ ಹೋಗುವುದು ಅವರಿಗೆ ವಾಡಿಕೆ. ಬೆಂಗಳೂರಿಗೆ ಸಮೀಪವಾದ ಕುಂಬಳಗೋಡು, ಹೆಸರುಘಟ್ಟ ಇಲ್ಲಿನ ಟಿ. ಬಿ. ಗಳು ಶ್ರೀಯುತರನ್ನು ಎಷ್ಟೋ ಬಾರಿ ಸ್ವಾಗತಿಸಿ ಪುನೀತವಾಗಿವೆ.

ಅಖಿಲ ಭಾರತ ಕೈಗಾರಿಕೋದ್ಯಮ ಸಂಘದವರು ಸೆಪ್ಟಂಬರ್ ೧೯೫೦ ರಲ್ಲಿ ವಿಶ್ವೇಶ್ವರಯ್ಯನವರಿಗೆ ೯೦ ತುಂಬಿದ ಹುಟ್ಟಿದ ಹಬ್ಬವನ್ನು ಬೊಂಬಾಯಲ್ಲಿ ಆಚರಿಸಿದರು. ತಾಜಮಹಲ್ ಹೋಟಲಿನಲ್ಲಿ ಅತ್ಯಂತ ಸಂಭ್ರಮದಿಂದ ಸತ್ಕಾರ ನಡೆಯಿತು. ಈ ಸಂಘವು ೧೯४೦ ರಲ್ಲಿ ವಿಶ್ವೇಶ್ವರಯ್ಯನವರಿಂದಲೇ ಸ್ಥಾಪಿತವಾಯಿತು. ಅಂದಿನಿಂದ ವರುಷ ವರುಷವೂ ಇವರೇ ಅಧ್ಯಕ್ಷರಾಗಿ ಆರಿಸಿ ಬರುತ್ತಿದ್ದಾರೆ. ಈ ಸತ್ಕಾರ ಕೂಟದಲ್ಲಿ ಲಘು ಭಾಷಣ ಮಾಡುತ್ತಾ ಸ್ವಾರಸ್ಯವಾದ ಎರಡು ಕತೆಗಳನ್ನು ಹೇಳಿದರು.

ಒಂದು ಕತೆ ಹೀಗಿದೆ ಒಬ್ಬ ವೃದ್ಧ, ತರುಣನಾಗಬೇಕೆಂದು ಅವನಿಗೆ ಆಶೆಯಾಯಿತು. ತಪಸ್ಸ ಮಾಡಿದ, ದೇವರನ್ನು ಮೆಚ್ಚಿಸಿದ. ದೇವರು ಪ್ರತ್ಯಕ್ಷನಾಗಿ 'ಬೇಕಾದ ವರ ಬೇಡು' ಎಂದ. 'ಇಪ್ಪತ್ತು ವರುಷದ ತರುಣನಾಗಬಯುಸುವೆ', ಎಂದ. 'ಆಗಲಿ, 'ಇನ್ನೇನು ಬೇಡುವೆ' ಎಂದು ದೇವರು ಮತ್ತೆ ಕೇಳಿದ ೮೦ ವಯಸ್ಸಿನ ಹೆಂಡತಿ ಇದ್ದಾಳೆ, ಅವಳೂ ನನ್ನ ಜೊತೆಯಲ್ಲಿರಬೇಕು' ಎಂದು ಬೇಡಿದ ಆ ಬೇಡಿಕೆಯೂ ದತ್ತ ವಾಯಿತು. ಕಡೆಯ ವರವನ್ನು ಬೇಡು ಎಂದು ಪರಮಾತ್ಮ ಹೇಳಿದ. 'ನನ್ನ ನಾಲ್ಕು ಮಕ್ಕಳೂ ನನ್ನೊಡನೆ ಇರಬೇಕು' ಎಂದ ಆತ. ದೇವ ನಸು ನಕ್ಕ—'ಇಪ್ಪತ್ತು ವರುಷದ ತರುಣನಿಗೆ ೮೦ ವರುಷದ ಹೆಂಡತಿ; ನಾಲ್ವತ್ತು ವಯಸ್ಸಿನ ಮಗ; ಇದೇನು ನಿನ್ನ ಬೇಡಿಕೆ. ತಾರುಣ್ಯಕ್ಕೆ ಇದೆಲ್ಲಾ ಸಮಂಜಸವೇ?' ಎಂದ ತನ್ನ ಹುಚ್ಚುತನದ ಅರಿವಾಯಿತ್ತು ಆಗ, ಆ ತಾರುಣ್ಯದ ಬಯಕೆಯ ಮುದುಕನಿಗೆ. ತಾರುಣ್ಯ ಎಂದರೆ ಹಾಗೆ.

ಸಂಸ್ಕೃತ ಸಾಹಿತ್ಯದಲ್ಲಿ ಮತ್ತೊಂದು ಸ್ವಾರಸ್ಯವಾದ ಕತೆಯುಂಟು. ಒಬ್ಬ ಮುದುಕಿ ಕೋಲೂರಿಕೊಂಡು ಬೆನ್ನು ಬಾಗಿ ಹೆಜ್ಜೆಯಿಡುತ್ತಿದ್ದಳು. ಅವಳನ್ನು ಗೇಲಿ ಎಬ್ಬಿಸಲು ಒಬ್ಬ ಹುಡುಗ—

ಅಧಃ ಪಶ್ಯಸಿ ಕಿಂ ಬಾಲೆ
ವಿನಷ್ಟಃ ಕಿಂನು ಮೃಗ್ಯಸೇ .

'ಎಲೇ, ಹುಡುಗಿ ಏನು ಕಳಕೊಂಡಿದ್ದೀ' ಏನನ್ನು ಬಗ್ಗಿ ಹುಡುಕುತ್ತಿರುವೆ' ಎಂದು ಕೇಳಿದ

ಕಿಂನ ಜಾನಾನಿ ಹೇ ಮೂಢ
ನಷ್ಟಂ ತಾರುಣ್ಯ ಮೌಕ್ತಿಕಂ

'ಕಳೆದುಹೋದ ತಾರುಣ್ಯವೆಂಬ ಮುತ್ತನ್ನು ಅರಸುತ್ತಿರುವುದು ನಿನಗೆ ತಿಳಿಯುವುದಿಲ್ಲವೇ ಮುರ್ಖಾಳ' ಎಂದಳಾ ಘಾಟಿ ಮುದುಕಿ.

ಎಷ್ಟೇ ಕಷ್ಟವಿರಲಿ ಜೀವ ಕಳೆದುಕೊಳ್ಳಲು ಸಾಮಾನ್ಯವಾಗಿ ಯಾರೂ ಬಯಸುವುದಿಲ್ಲ 'ಬಾಲ್ಯದಲ್ಲಿ ನಾನು ಬಯಸುತ್ತಿದ್ದ ಬಯಕೆಗಳೆಲ್ಲವೂ ಈಗ ಪೂರ್ಣವಾಗಿದೆ ಬಯಸದೆಯೇ ಈ ಭೂಮಿಯಲ್ಲಿ ನಾನು

ಜನ್ಮತಾಳಿದೆ. ಜೀವನ ನನಗೆ ಸುಖಪ್ರದವಾಗಿಯೇ ಇದೆ. ಮತ್ತೆ ಬಾಳ ಬಯಸುವೆಯೋ?' ಎಂದು ಕೇಳಿದರೆ 'ಸಂತೋಷದಿಂದ ಆಗಲಿ' ಎಂದು ಫ್ರಾನ್ಸಿನ ತತ್ವ ವೇತ್ತನಾದ ರಿನೋ ಹೇಳುವಂತೆ ನಾನೂ ಹೇಳುತ್ತೇನೆ ಎನ್ನುತ್ತಾರೆ ವಿಶ್ವೇಶ್ವರಯ್ಯ.

ವಿಶ್ವೇಶ್ವರಯ್ಯನವರು ತಮ್ಮ ಬುದ್ಧಿಸಾಮರ್ಥ್ಯ, ದಕ್ಷತೆ, ಪ್ರಾಮಾಣಿಕತೆ, ನಿಷ್ಕಳಂಕ ಜೀವನ, ಕಾರ್ಯ ತತ್ಪರತೆ, ರಾಜ ಕಾರಣ ಪಟುತ್ವ ಇವುಗಳಿಂದ ಪ್ರಜೆ ಪ್ರಭು ಉಭಯತ್ರರ ಪ್ರೀತಿ ವಿಶ್ವಾಸಕಕ್ಕೆ ಪಾತ್ರರಾದರು. ಇವರ ಹುಟ್ಟಿದ ಹಬ್ಬವನ್ನು ಇಡೀ ಕರ್ನಾಟಕದಲ್ಲಿ ಆಚರಿಸುತ್ತಾರೆ. ಬೊಂಬಾಯಿಯ ವಣಿಕ್ ಮಂಡಲಿ ಅತ್ಯಂತ ಸಂಭ್ರಮದಿಂದ ಇವರ ಜನ್ಮೋತ್ಸವ ನಡೆಸುತ್ತದೆ. ಇವರಿಗೆ ಬೊಂಬಾಯಿ--ಬೆಂಗಳೂರು ಎರಡೂ ಒಂದೇ. ಬೆಂಗಳೂರಿನಲ್ಲೊಂದು ಮನೆ, ಬೊಂಬಾಯಲ್ಲೊಂದು ಬಂಗಲೆ. ಎರಡರಲ್ಲೂ ಸದಾ ಕಾಲದಲ್ಲೂ ಅಡಿಗೆಯ ಆಳು ಕಾಳು ಸಕಲವೂ ಸಿದ್ಧ. ಬೊಂಬಾಯಿ ಕರ್ನಾಟಕ ಸಂಘದ ಸ್ವರ್ಣ ಮಹೋತ್ಸವದಲ್ಲಿ ಭಾಷಣ ಮಾಡುತ್ತಾ ಬೊಂಬಾಯಿಗೂ ಮೈಸೂರಿಗೂ ನಿಕಟ ಬಾಂಧವ್ಯ ಬೆಳೆಸಿದುದರಲ್ಲಿ ವಿಶ್ವೇಶ್ವರಯ್ಯನವರ ಶ್ರೇಷ್ಠ ಪಾತ್ರವನ್ನು ಜಯಚಾಮರಾಜ ಒಡೆಯರವರು ಶ್ಲಾಘಿಸಿದರು. ಅಲ್ಲದೆ ಅಸ್ವಸ್ಥರಾಗಿದ್ದ ವಿಶ್ವೇಶ್ವರಯ್ಯನವರ ಮನೆಗೆ ತಾವೇ ಭೇಟಿಯಿತ್ತು ಗೌರವಿಸಿದರು. ದಿವಾನ್ ಪದವಿಯಿಂದ ನಿವೃತ್ತರಾದಾಗ ಕೃಷ್ಣರಾಜ ಒಡೆಯರವರು ಹೆಚ್ಚಿನ ವಿರಾಮ ವೇತನ ದಯಪಾಲಿಸಿದರು. ನಿವೃತ್ತಿವೇತನ ದೊರೆಯದಿದ್ದರೂ ಚಿಂತೆಯಿಲ್ಲವೆಂದು ಕೆಲಸಕ್ಕೆ ರಾಜೀನಾಮೆ ಕೊಟ್ಟರೂ, ಬೊಂಬಾಯಿ ಸರಕಾರವೂ ಇವರ ಕಾರ್ಯ ದಕ್ಷತೆಯನ್ನು ಮೆಚ್ಚಿ ನಿವೃತ್ತಿವೇತನ ಕೊಟ್ಟಿತು. ಕಾಲ ಕಾಲಕ್ಕೆ ಬಿರುದು ಬಾವಲಿಗಳನ್ನು ಕೊಟ್ಟು ಬ್ರಿಟಿಷ್ ಪ್ರಭುತ್ವವೂ ತನ್ನ ಮೆಚ್ಚುಗೆಯನ್ನು ತೋರಿಸಿದೆ. ಈಡರ್ ನಗರದ ನೀರಾವರಿ ಯೋಜನೆಯನ್ನು ಸಿದ್ಧಗೊಳಿಸಿದ್ದಕ್ಕಾಗಿ ೧೯೦೬ ರಲ್ಲಿ ಕೈಸರ್-ಇ-ಹಿಂದ್ ಪದಕವೂ ; ೧೯೧೧ ರಲ್ಲಿ ಸಿ. ಐ ಇ ಬಿರುದೂ; ೧೯೧೫ ರಲ್ಲಿ ಕೆ. ಸಿ. ಐ. ಇ. ಎಂಬ ಬಿರುದೂ ಆಂಗ್ಲ ಸಾಮ್ರಾಜ್ಯದಿಂದ ಇವರಿಗೆ ದೊರೆತವು. ಭಾರತದ ವಿಶ್ವವಿದ್ಯಾನಿಲಯಗಳು ನಾನು ತಾನೆಂದು ಇವರಿಗೆ ಗೌರವ ಪ್ರಶಸ್ತಿ ಕೊಡಲು ಪೈಪೋಟಿ ನಡೆಸಿದುವು.

೧೯೨೩ ರಲ್ಲಿ ಕಲ್ಕತ್ತಾ ವಿಶ್ವವಿದ್ಯಾನಿಲಯವು ಡಿ ಎಸ್‌ಸಿ. ಯನ್ನೂ ೧೯೩೧ ರಲ್ಲಿ ಬೊಂಬಾಯಿ ವಿಶ್ವವಿದ್ಯಾಸಿಲಯವು ಎಲ್ ಎಲ್. ಡಿ. ಪ್ರಶಸ್ತಿಯನ್ನೂ ಕೊಟ್ಟು ಸನ್ಮಾನಿಸಿದುವು. ೧೯೩೮ ರಲ್ಲಿ ಭಾರತದ ವಿಜ್ಞಾನ ಸಂಸ್ಥೆ ಇವರನ್ನು ಸತ್ಕರಿಸಿ ವಿಶೇಷ ಗೌರವ ಸಲ್ಲಿಸಿತು. 'ನಾನೇ ಸ್ಥಾಪಿಸಿದ ವಿಶ ವಿದ್ಯಾನಿಲಯದಿಂದ ಗೌರವ ಪ್ರಶಸ್ತಿ ಪಡೆಯುವುದರಲ್ಲಿ ಹೆಚ್ಚುಳವೇನು ನನ್ನ ಮಕ್ಕಳಿಂದ ನಾನು ಹೊಗಳಿಸಿಕೊಳ್ಳಬೇಕೆ?' ಅದು ಆತ್ಮ ಪ್ರಶಂಸೆ ಯಾದೀತು ಮೈಸೂರಿಗೆ ಸೇವೆ ಸಲ್ಲಿಸುವುದು ನನ್ನ ಆದ್ಯ ಕರ್ತವ್ಯ. ಕರ್ತವ್ಯ ನಿರ್ವಹಿಸಿದೆನೆಂದು ಪ್ರತ್ಯೇಕ ಪ್ರಶಸ್ತಿ ನನಗೆ ಬೇಕೆ? ಎಂದು ಮೈಸೂರು ವಿಶ್ವವಿದ್ಯಾನಿಲಯದಿಂದ ಗೌರವ ಪ್ರಶಸ್ತಿ ತೆಗೆದುಕೊಳ್ಳಲು ಇವರು ಬಹಳ ತಗಾದೆ ಮಾಡಿದರು. ಆದರೂ ಶ್ರೀಮನ್ಮಹಾರಾಜರು ಬಹಳ ಒತ್ತಾಯ ಮಾಡಿದ್ದರಿಂದ ನಿರ್ವಾಹವಿಲ್ಲದೆ ಕಡೆಗೆ ಎಲ್ ಎಲ್. ಡಿ. ಪ್ರಶಸ್ತಿಯನ್ನು ಸ್ವೀಕರಿಸಿದರು.

ಭಾರತವನ್ನು ಪಾಶ್ಚಾತ್ಯ ದೇಶಗಳಂತೆ ಮಾಡಬೇಕೆಂಬ ಆಸೆ, ಕುತೂಹಲ, ಕಲಿಯುಬೇಕೆಂಬ ದಾಹ ಇವರನ್ನು ಆರು ಬಾರಿ ಪಾಶ್ಚಿಮಾತ್ಯ ದೇಶಗಳಿಗೆ ಹೋಗಿ ಬರುವಂತೆ ಮಾಡಿತು. ಮೊಟ್ಟಮೊದಲು ೧೮೯೮ ರಲ್ಲಿ ಜಪಾನಿಗೆ ಹೋಗಿಬಂದರು. ೧೯೦೮ ರಲ್ಲಿ ದೀರ್ಘ ಪ್ರವಾಸ ಮಾಡಿ ಇಂಗ್ಲೆಂಡ್, ಫ್ರಾನ್ಸ್, ಜರ್ಮನಿ, ಸ್ವೀಡನ್, ಡೆನ್ಮಾರ್ಕ್, ಇಟಲಿ, ಅಮೆರಿಕ, ಕೆನಡಾ ಮೊದಲಾದ ದೇಶಗಳಿಗೆ ಭೇಟಿಕೊಟ್ಟರು. ಈ ಪರ್ಯಟನದಲ್ಲಿಯೇ ಮಾಸ್ಕೊ ಮತ್ತು ಸೆಂಟ್ ಪೀಟರ್ಸ್‌ಬರ್ಗ್ (ಈಗಿನ ಲೆನಿನ್‌ಗ್ರಾಡ್) ನಗರಗಳಿಗೆ ಭೇಟಿ ಇತ್ತುದು. ಬಾಲ್ಟಿಕ್ ಸಮುದ್ರವನ್ನು ಒಂದು ಸಣ್ಣ ದೋಣಿಯಲ್ಲಿ ದಾಟಿ ಹೋಗಬೇಕಾಯಿತು. ಅಪಾರ ಚಳಿ. ಆದರೂ ಚಿಂತೆಯಿಲ್ಲವೆಂದು ಹೋದರು. ಅಷ್ಟು ಕತೂಹಲ ಜ್ಞಾನಾರ್ಜನೆಯ ಪಿಪಾಸೆ. ಹೋದೆಡೆಯಲ್ಲೆಲ್ಲ ನವೀನ ಸಂಶೋಧನೆ, ಹೊಸ ಹೊಸ ವಿಚಾರಗಳಿಗೆ ವಿಶೇಷ ಗಮನಕೊಟ್ಟು ಟಿಪ್ಪಣಿ ಮಾಡಿಕೊಳ್ಳುವರು. ಅವಕ್ಕೆ ಸಂಬಂಧಪಟ್ಟ ಪುಸ್ತಕಗಳನ್ನು ಕೊಂಡು ಓದುವರು. ಮಿಲಾನ್ ನಗರಕ್ಕೆ ಹೋದಾಗ, ಅಲ್ಲಿನ ಒಳಚರಂಡಿ ವ್ಯವಸ್ಥೆಯನ್ನು ಒಳಕ್ಕಿಳಿದು ನೋಡಿ ಬಂದರು. 'ನಿಮಗೇಕೆ ಇಷ್ಟು ಕುತೂಹಲ' ಎಂದು ಅಲ್ಲಿನ

ಇಂಜಿನಿಯರುಗಳು ಪ್ರಶ್ನಿಸಿದರಂತೆ! ಪ್ರತಿಯೊಂದು ವಿಷಯವನ್ನೂ ಸೂಕ್ಷ್ಮ ವಾಗಿ ಕೂಲಂಕಷವಾಗಿ ನೋಡುವುದು ಅವರ ಗುಣ. ಲಂಡನ್ ನಗರದ ಒಳಚರಂಡಿಯನ್ನು ಒಬ್ಬ ಮನುಷ್ಯ ಧಾರಾಳವಾಗಿ ನಡೆದು ಹೋಗ ಬಹುದು. ಒಳಗೆ ವಿದ್ಯುದ್ದೀಪವೂ ಇರುತ್ತದೆ. ರಸ್ತೆಗೆ ನೂರಾರು ಅಡಿಗಳ ಕೆಳಗೆ ಮೋರಿಗಳು ಹರಿಯುತ್ತಿರುತ್ತವೆ. ಇಂಜಿನಿಯರ ಸಾಹಸ ಇದರಲ್ಲಿ ವ್ಯಕ್ತವಾಗುತ್ತದೆ.

ವಿಶ್ವೇಶ್ವರಯ್ಯನವರು ೧೯೧೯ರಲ್ಲಿ ಬೊಂಬಾಯಿಯ ಶ್ರೀಮಂತರಾದ ದಾಮೋದರ ಥ್ಯಾಕರ್ಸೆ, ಮೂಲ್‌ರಾಜ್ ಖಟಾವ್ ಇತ್ಯಾದಿ ೧೦-೧೨ ಪ್ರವಾಸಿಗರೊಂದಿಗೆ ಜಪಾನ್, ಅಮೆರಿಕ, ಯೂರೋಪ್ ಮೊದಲಾದ ಪ್ರದೇಶಗಳಲ್ಲಿ ಒಂದು ವರುಷಕ್ಕೂ ಹೆಚ್ಚು ಅವಧಿಯ ದೀರ್ಘ ಪ್ರವಾಸ ಕೈ ಗೊಂಡರು. ಲಂಡನ್ ನಗರದಲ್ಲಿ ಹತ್ತು ತಿಂಗಳಿಗೂ ಹೆಚ್ಚು ಕಾಲ ಉಳಿದು 'ಭಾರತದ ಪುನರುಜ್ಜೀವನ' (Reconstructing India) ಎಂಬ ಗ್ರಂಥವನ್ನು ಬರೆದು ಪ್ರಕಟಿಸಿದರು.

೧೯೨೬ ರಲ್ಲಿ ನಾಲ್ಕನೆ ಪ್ರವಾಸ ಇಂಗ್ಲೆಂಡ್, ಅಮೆರಿಕಗಳಲ್ಲಿ. ಈ ಪ್ರವಾಸದಲ್ಲಿಯೇ ಭದ್ರಾವತಿಯ ಕಬ್ಬಿಣಕ್ಕೆ ಪರದೇಶಗಳಲ್ಲಿ ಗಿರಾಕಿ ಪಡೆಯಲು ಪ್ರಯತ್ನ ನಡೆಸಿದ್ದು. ೧೯೩೫ ರ ಪ್ರವಾಸ ಮೋಟಾರು ತಯಾ. ರಿಕೆ ವಿಷಯವನ್ನು ಪರಿಪೂರ್ಣವಾಗಿ ಅರಿಯಲು ಕೈಗೊಂಡದ್ದು. ಆರು ತಿಂಗಳು ಕಾಲ ಯೂರೋಪ್ ಮತ್ತು ಅಮೆರಿಕಾದಲ್ಲಿ ಮೋಟಾರು ತಯಾರಿಕೆ ವಿಷಯವನ್ನು ಪರಿಶೀಲಿಸಿದರು. ಆರನೆ ಪ್ರವಾಸ ಕೈಗೊಂಡದ್ದು ೧೯೪೬ ರಲ್ಲಿ ಅಖಿಲ ಭಾರತ ಮಾನ್ಯುಫಾಕ್ಚರಿಂಗ್ ಅಸೋಸಿಯೇಷನ್ನಿನ ಒಂಭತ್ತು ಜನ ಸದಸ್ಯರ ನಾಯಕರಾಗಿ. ಅನೇಕ ಔದ್ಯೋಗಿಕ ಸಂಸ್ಥೆ ಗಳನ್ನು ಭೇಟಿಮಾಡಿ ಭಾರತಕ್ಕೆ ಬಂದನಂತರ ಈ ಮಂಡಲಿ ತನ್ನ ಅನುಭವವನ್ನು ೭೯೮ ಪುಟಗಳ ವರದಿಯಾಗಿ ಪ್ರಕಟಿಸಿತು.

ವಿಶ್ವೇಶ್ವರಯ್ಯನವರು ಈ ಪಾಶ್ಚಾತ್ಯ ದೇಶ ಪರ್ಯಟನದಿಂದ ಅಪಾರ ಅನುಭವ ಪಡೆದು ಅನೇಕ ವಿಷಯಗಳನ್ನು ಸಂಗ್ರಹಿಸಿ ಅದರ ಫಲವೆಲ್ಲವನ್ನೂ ದೇಶಕ್ಕೆ ಧಾರೆ ಎರೆದಿದ್ದಾರೆ. ಈ ಪ್ರವಾಸಗಳಿಂದ ಪ್ರಪಂಚದ ಎಲ್ಲ ಭಾಗ

ಗಳಲ್ಲಿಯೂ ಅನೇಕ ವಿಖ್ಯಾತರ ಸ್ನೇಹ ಬೆಳಸಿ, ಅವರ ಪ್ರೀತಿ ವಿಶ್ವಾಸ ಗಳಿಗೆ ಪಾತ್ರರಾಗಿರುತ್ತಾರೆ.

ಭದ್ರಾವತಿ ಕಬ್ಬಿಣ ಕಾರ್ಖಾನೆಯನ್ನು ಸ್ಥಾಪಿಸಲು ಸಹಾಯಕ ರಾಗಿದ್ದ ಅಮೆರಿಕದ ಚಾರ್ಲೆಸ್ ಪೆರ್ರಿ ಅವರು—'ಪ್ರಪಂಚದ ಎಲ್ಲ ಭಾಗ ಗಳನ್ನೂ ನಾನು ನೋಡಿದ್ದೇನೆ. ಜಗತ್ತಿನ ಅನುಭವ ನನಗೆ ಸಾಕಷ್ಟು ಆಗಿದೆ. ನನ್ನ ವಿಶಾಲ ಅನುಭವದಲ್ಲಿ ತಮಗಿಂತ ಹೆಚ್ಚು ಮಾನ್ಯತೆ, ಗೌರವಕ್ಕೆ ಅರ್ಹನಾದ ಬೇರೊಬ್ಬ ವ್ಯಕ್ತಿಯನ್ನು ನಾನು ನೋಡಿಲ್ಲ. ಸಚ್ಚಾರಿತ್ರ್ಯ, ಉದಾತ್ತ ಧ್ಯೇಯ, ಅಪರಿಮಿತ ದೇಶಭಕ್ತಿ ಇವುಗಳಲ್ಲದೆ ತಮ್ಮ ಅಸಾಧಾರಣ ಇಂಜಿನಿಯರಿಂಗ್ ಪ್ರೌಢಿಮೆಯೂ ಈ ಮನ್ನಣೆಗೆ ಮುಖ್ಯ ಕಾರಣ-ಎಂದು ೧೯೩೯ ರಲ್ಲಿ ವಿಶ್ವೇಶ್ವರಯ್ಯನವರು ಭದ್ರಾವತಿ ಕಾರ್ಖಾನೆಯ ಅಧ್ಯಕ್ಷಸ್ಥಾನದಿಂದ ನಿವೃತ್ತರಾದ ಸಂದರ್ಭದಲ್ಲಿ ಬರೆ ದಿರುತ್ತಾರೆ.

ಇಂಥ ಪ್ರಶಂಸಾ ಪತ್ರಗಳು ಎಷ್ಟೋ ಇವೆ. ಮಹಾತ್ಮ ಗಾಂಧಿಯ ವರಿಗೂ--ವಿಶ್ವೇಶ್ವರಯನವರಿಗೂ ಕೈಗಾರಿಕೆಯ ವಿಷಯದಲ್ಲಿ ಭಿನ್ನತೆಗಳು ಅನೇಕ. ಒಬ್ಬರಿಗೆ ಹಳ್ಳಿಯೆಲ್ಲ ಊರಾಗಬೇಕು; ಇನ್ನೊಬ್ಬರಿಗೆ ಊರೆಲ್ಲ ಮರಳಿ ಹಳ್ಳಿಯಾಗಬೇಕು. ಒಬ್ಬರು ಕೇಂದ್ರೀಕರಣವಾದಿಗಳು, ಇನ್ನೊಬ್ಬರು ವಿಕೇಂ ದ್ರೀಕರಣ ಪ್ರತಿಪಾದಕರು. ಒಬ್ಬರಿಗೆ ಭಾರತವೆಲ್ಲ ಯಂತ್ರಮಯವಾಗ ಬೇಕೆಂಬ ಯಂತ್ರೀಕರಣದ ಹುಚ್ಚು. ಇನ್ನೊಬ್ಬರಿಗೆ ಯಂತ್ರಭೂತದ ಭಯ. ಆದರೂ ಒಬ್ಬೊಬ್ಬರಲ್ಲಿ ಇನ್ನೊಬ್ಬರಿಗೆ ಅಪಾರ ಪ್ರೀತಿ ಗೌರವ. ವಿಶ್ವೇಶ್ವರಯ್ಯ ನವರು ಅಖಿಲ ಭಾರತ ಗ್ರಾಮೋದ್ಯೋಗ ಸಂಘದ ಅಧ್ಯಕ್ಷರಾಗಬೇಕೆಂದು ಗಾಂಧೀಜಿಯ ಬಯಕೆ. ಈ ಬಗ್ಗೆ ವಿಶೇಷ ಪತ್ರವ್ಯವಹಾರಗಳೂ ನಡೆದುವು. ಕಾರಣಾಂತರದಿಂದ ಇದು ಸಾಧ್ಯವಾಗಲಿಲ್ಲ. ಆದರೂ ಮಹಾತ್ಮರಿಗೆ ವಿಶ್ವೇಶ್ವ ರಯ್ಯನವರಲ್ಲಿ ಗೌರವ ಕಡಮೆಯಾಗಲಿಲ್ಲ, ಇನ್ನೂ ಹೆಚ್ಚಿತು.

ವಿಶ್ವೇಶ್ವರಯ್ಯನವರಿಗೆ ಪ್ರತಿ ದಿನವೂ ಪ್ರಪಂಚದ ನಾನಾಭಾಗಗಳಿಂದ ಅನೇಕ ಕಾಗದ ಪತ್ರಗಳು ಬರುತ್ತವೆ. ಅವುಗಳನ್ನು ಅವರೇ ಖುದ್ದಾಗಿ ನೋಡಿ, ಪ್ರತ್ಯುತ್ತರಗಳನ್ನು ಹೇಳಿ ಬರೆಯಿಸುತ್ತಾರೆ. ಪತ್ರಿಕೆಗಳಲ್ಲಿ

ಬರುವ ಮುಖ್ಯ ವಿಷಯಗಳನ್ನು ಕತ್ತರಿಸಿ 'ಫೈಲ್' ಮಾಡಿ ಇರಿಸುತ್ತಾರೆ. ಪ್ರತಿಯೊಂದು ಪಂಕ್ತಿಯನ್ನೂ ಪದವನ್ನೂ ಓದಿ ತಪ್ಪುಗಳನ್ನು ತಿದ್ದುವರು. ತಪ್ಪುಗಳು ಅಧಿಕವಾಗಿದ್ದರೆ ಮತ್ತೆ 'ಟೈಪ್' ಮಾಡಿಸುವರು. ಮುಖ್ಯ ಪತ್ರಗಳು ಎರಡು-ಮೂರಾವರ್ತಿ ಪರಿಷ್ಕಾರವಾಗುವುದೂ ಉಂಟು. ಪ್ರತಿಯೊಂದರಲ್ಲಿಯೂ ಕ್ರಮ. ಎಲ್ಲವೂ ನಾಜೂಕಾಗಿ, ಅಚ್ಚುಕಟ್ಟಾಗಿರಬೇಕು. ಲಕೋಟೆಗೆ ಅಂಟು ಹಚ್ಚುವುದೂ ಒಂದು ಕಲೆ. ಹೊಸ ಆಳುಗಳು ಬಂದರೆ, ಮೊದಲು ಅವರಿಗೆ ಅಂಟು ಹಚ್ಚುವ ಶಿಕ್ಷಣ. ಅಂಟು ಸಮವಾಗಿರಬೇಕು. ಹೆಚ್ಚು ಅಂಟು ಬಿದ್ದರೆ ಲಕೋಟೆ ಗಲೀಜಾಗುತ್ತದೆ ಕಾಗದದ ಅಂಚಿನಿಂದ ಹೆಚ್ಚು ಅಂಟನ್ನು ತೆಗೆಯುವ ವಿಧಾನವನ್ನು ಅವರೇ ತೋರಿಸಿಕೊಡುವರು. ಬಹು ಮುಖ್ಯ ಕಾಗದಗಳಿಗೆ ತಾವೇ ಸ್ವತಃ ಅಂಟನ್ನೂ ಅಂಚೆ ಚೀಟಿಯನ್ನೂ ಹಚ್ಚುವರು. ಅಷ್ಟು ವಿತರಣೆ ಅಲ್ಪ ಕೆಲಸದಲ್ಲಿಯೂ ಸಹ.

ವಿಶ್ವೇಶ್ವರಯ್ಯನವರಿಗೆ ಆತ್ಮಾಭಿಮಾನ, ದೇಶಾಭಿಮಾನ ಅಪಾರ. ಮಿತಭಾಷಿ, ಮಾತುಗಾರರಲ್ಲ. ಮಾತಿನಲ್ಲಿ ಹಿಡಿತ ಬಹಳ. ಆಡುವ ಪ್ರತಿ ಮಾತೂ ತೂಕದ ಮಾತು. ಆಧಾರವಿಲ್ಲದೆ ಅಂಕಿ ಸಂಖ್ಯೆಗಳಿಲ್ಲದೆ ಮಾತಿಲ್ಲ, ಭಾಷಣವಿಲ್ಲ ನಡೆನುಡಿಯಲ್ಲಿ ಗಾಂಭೀರ್ಯ. ಸರಳ ಸ್ವಭಾವ. ಆದರೂ ಆತ್ಮಗೌರವಕ್ಕೆ ದೇಶಾಭಿಮಾನಕ್ಕೆ ಸಂಚಕಾರ ಬರುವುದನ್ನು ಸ್ವಲ್ಪವೂ ಸಹಿಸರು. ೧೯೧೧ರಲ್ಲಿ ಇವರು ಮೈಸೂರಿನ ಛೀಫ್ ಇಂಜಿನಿಯರಾಗಿದ್ದಾಗ ನಡೆದ ಒಂದು ಸಂಗತಿಯನ್ನು ಇಲ್ಲಿ ನಿದರ್ಶಿಸಬಹುದು ಮೈಸೂರಿನಲ್ಲಿ ನವರಾತ್ರಿಹಬ್ಬ, ಅಟ್ಟಹಾಸದ ದರ್ಬಾರು. ಇದರ ವೈಖರಿ ಜಗತ್ಪ್ರಸಿದ್ಧವಾದುದು. ನನಗೆ ಆಮಂತ್ರಣ ಬಂದೀತೆ ಎಂದು ನಿಲುವಂಗಿ ತೊಟ್ಟು, ಟೊಂಕಕಟ್ಟಿ ರಾಜಭಕ್ತರು ಕಾದಿರುವರು. ಈ ವೈಭವ ದೇಶವಿದೇಶಗಳ ಜನರನ್ನು ಆಕರ್ಷಿಸುತ್ತದೆ ಇಲಾಖಾಧಿಕಾರಿಗಳಾದ ವಿಶ್ವೇಶ್ವರಯ್ಯನವರಿಗೂ ದರ್ಬಾರಿಗೆ ಬರಲು ಆಮಂತ್ರಣ ಬಂತು ಹಿಂದಿನ ವರ್ಷ ದರ್ಬಾರಿನ ಅನುಭವ ಪಡೆದಿದ್ದ ಇವರು ತಮ್ಮನ್ನು ಮನ್ನಿಸಬೇಕಾಗಿ ಮಹಾಸ್ವಾಮಿಗಳ ಕಾರ್ಯದರ್ಶಿಗಳಿಗೆ ಕಾಗದ ಬರೆದರು. ದರ್ಬಾರಿಗೆ ಬಾರದಿರುವುದು ರಾಜಭಕ್ತಿಗೆ ಸ್ವಲ್ಪ ಲೋಪಬಂತೆಯೋ ಎಂದು ಭಾವಿಸಲಾಗುತ್ತದೆ. ವಿಶ್ವೇಶ್ವರಯ್ಯನವರು ಬಾರದಿರುವುದಕ್ಕೆ ಕಾರಣ ಕೇಳಲಾಯಿತು.

ಮೈಸೂರು ಸರ್ಕಾರದಿಂದ ಸಂಬಳ ಪಡೆಯುವ ಆಂಗ್ಲ ಅಧಿಕಾರಿಗಳು "ದರ್ಬಾರಿನ ಮಂಟಪದಲ್ಲಿ ಕುರ್ಚಿಯಮೇಲೆ ಕುಳಿತಾಗ, ದಿವಾನರಿಂದ ಮೊದಲ್ಗೊಂಡು ಎಲ್ಲ ದೇಶೀಯರೂ ಮಂಡಿಯೂರಿ ನೆಲದ ಮೇಲೆ ಕೂಡುವುದು ತನಗೆ ಸರಿಕಾಣುವುದಿಲ್ಲ. ದೇಶೀಯರಿಗೆ ಅಪಮಾನ ಪಡಿಸಬೇಕೆಂಬ ಉದ್ದೇಶವಿಲ್ಲದಿದ್ದರೂ, ಇದು ಅಳುಕು. ಈ ಅಳುಕನ್ನು ಪೂರ್ಣವಾಗಿ ತಪ್ಪಿಸುವುದು ಸಾಧ್ಯವೇ" ಎಂದು ದಿಟ್ಟತನದಿಂದ ಪ್ರತ್ಯುತ್ತರ ಬರೆದರು. ಮರು ವರ್ಷವೇ ಎಲ್ಲರಿಗೂ ಕುರ್ಚಿಗಳ ಏರ್ಪಾಡಾಯಿತು. ಮೂವತ್ತು ವರ್ಷಗಳಿಂದ ಅನೇಕ ದಿವಾನರಾದಿಯಾಗಿ ಎಲ್ಲರೂ ಸಹಿಸಿಕೊಂಡಿದ್ದ ಈ ಅಪಮಾನವನ್ನು ತಾನು ಸಹಿಸಲಾರೆ ಎಂದು ಆಗತಾನೆ ನೌಕರಿಗೆ ಸೇರಿದ್ದ ವಿಶ್ವೇಶ್ವರಯ್ಯನವರು ಧೈರ್ಯದಿಂದ ತೋರಿಸಿಕೊಟ್ಟರು. ಇವರ ದಿಟ್ಟತನದಿಂದ ಮೂವತ್ತು ವರ್ಷಗಳು ಹಳೆಯ ಪದ್ಧತಿ ಬದಲಾಯಿಸಿತು!

ಸದಾ ಇವರು ಇಹಲೋಕದ ವಿಚಾರವನ್ನೇ ಮಾಡುತ್ತಿರುತ್ತಾರೆ. ಇವರಿಗೆ ಪರಲೋಕದಲ್ಲಿ ವಿಶ್ವಾಸವಾದರೂ ಇದೆಯೇ? ಇವರ ಆಧ್ಯಾತ್ಮಿಕ ಅಭಿಪ್ರಾಯವಾದರೂ ಏನು ಎಂಬ ಕುತೂಹಲ ಕೆರಳುತ್ತದೆ. ಇವರಿಗೆ ಪರದಲ್ಲಿ ಕರ್ಮ ಸಿದ್ಧಾಂತದಲ್ಲಿ ಪುನರ್ಜನ್ಮದಲ್ಲಿ ನಂಬಿಕೆ ಇಲ್ಲವೆಂದಲ್ಲ. ಮಾತಾಪಿತೃಗಳ ಶ್ರಾದ್ಧವನ್ನು ಅತ್ಯಂತ ಶ್ರದ್ಧೆಯಿಂದ ವರ್ಷವರ್ಷವೂ ಆಚರಿಸುವರು. ಆದರೆ ಪಾರಮಾರ್ಥಿಕ ವಿಚಾರವಾಗಿ ಒಣ ಮಾತನಾಡುತ್ತಾ ಕಾಲವಿಳಂಬ ಮಾಡಬಯಸರು. ಇವರು ಕರ್ಮಯೋಗಿಗಳು. ಕರ್ಮದಿಂದಲೇ ಮೋಕ್ಷಸಾಧನೆಯಾಗುತ್ತದೆಂಬ ದೃಢ ನಂಬಿಕೆ. ಕರ್ಮ ಮಾಡಲು, ಶ್ರಮಿಸಲು ದೇಹ ಗಟ್ಟಿಮುಟ್ಟಾಗಿ ಆರೋಗ್ಯವಾಗಿರಬೇಕಷ್ಟೆ. ಅನ್ನ, ನೀರು, ಗಾಳಿ, ವಸತಿ, ಉಡುಪು ಇವೆಲ್ಲವೂ ಮಾನವನ ಅಗತ್ಯಗಳು. ಜೀವನಕ್ಕೆ ಇವೆಲ್ಲವೂ ಎದುವರೆಗೆ ಲೋಪವಾಗಿದಿಯೋ ಅದುವರೆಗೆ ಅನ್ಯ ಚಿಂತೆ ಏಕೆ, ಎಂಬುದೇ ಇವರ ಜೀವನ ತತ್ವದ ಅಡಿಗಲ್ಲು. ಇದು ನನ್ನ ಪೂರ್ವ ಜನ್ಮದ ಫಲ ಎಂದು ಹಣೆಬರಹ ಹಳಿಯುವುದನ್ನು, ಅದರಲ್ಲಿಯೂ ತರುಣರಲ್ಲಿ—ಎಂದಿಗೂ ಸಹಿಸರು.

ವಿಶ್ವೇಶ್ವರಯ್ಯನವರದು ನಿಷ್ಕಳಂಕ ಜೀವನ. ಅಂಜನಹಾಕಿ ಹುಡುಕಲಿ, ದುರ್ಬೀನು ಹಾಕಿ ನೋಡಲಿ ಅವರ ಜೀವನ ಚರಿತ್ರೆಯಲ್ಲಿ ಯಾವ

ಕಳಂಕವೂ ಕಾಣದು. ಇಷ್ಟು ದೀರ್ಘ ಅವಧಿಯ ಸಾರ್ವಜನಿಕ ಜೀವನದಲ್ಲಿ ಒಂದು ಕಾಸನ್ನೂ ಇವರು ದುರ್ವಿನಿಯೋಗ ಮಾಡಿದವರಲ್ಲ. ಸಾಮಾನ್ಯವಾಗಿ ನಮ್ಮ ದೇಶದಲ್ಲಿ ಉನ್ನತ ಅಧಿಕಾರಕ್ಕೆ ಬಂದರೆ, ಆ ಸ್ಥಾನ ಬಲದಿಂದ ನಂಟರಿಷ್ಟರಿಗೆ, ಬೇಕುಬೇಕಾದವರಿಗೆ ಉದ್ಯೋಗ ದೊರಕಿಸಿ ಕೊಡುವುದು ವಾಡಿಕೆ. ಸರ್ಕಾರದಲ್ಲಿ ನೌಕರಿ, ಇಲ್ಲವೇ ಬೇರೆ ಯಾವದಾದರೂ ರೂಪದಲ್ಲಿ ಪ್ರತಿಫಲ ಕೊಡಿಸುವುದು ಸರ್ವಸಾಮಾನ್ಯ. ಉದಾಹರಣೆಗಳು ಅನವಶ್ಯಕ. ಈ ಪದ್ಧತಿಗೆ ಲೋಪತಂದ ಅತಿವಿರಳ ಅಪರೂಪ ವ್ಯಕ್ತಿ ವಿಶ್ವೇಶ್ವರಯ್ಯ. ಬಂದುಬಾಂಧವರನ್ನು ಹತ್ತಿರ ಕೂಡ ಸೇರಿಸುತ್ತಿರಲಿಲ್ಲ. ಇವರು ಅಧಿಕಾರದಲ್ಲಿದ್ದಾಗ ಇವರ ಅರಿವಿಲ್ಲದೆಯೇ ಸಮೀಪ ಬಂಧು ಓರ್ವರಿಗೆ ಮೈಸೂರು ಸರಕಾರದಲ್ಲಿ ದೊಡ್ಡ ಉದ್ಯೋಗ ದೊರೆಯುವುದರಲ್ಲಿತ್ತು. ಸರ್ವ ವಿಧದಲ್ಲಿಯೂ ಅವರು ಆ ಸ್ಥಾನಕ್ಕೆ ಅರ್ಹರೂ ಆಗಿದ್ದರು. ಆದರೂ ಈ ವಿಷಯ ತಿಳಿಯುತ್ತಲೇ, ಆ ಬಂಧುಗಳನ್ನು ಕರೆಸಿ, ಸರಕಾರ ಕೊಡಬಹುದಾದ ಸಂಬಳವನ್ನು ತಾವೇ ಸ್ವತಃ ಕೊಡುವುದಾಗಿ ಭರವಸೆಯಿತ್ತು, ಅವರು ಸರಕಾರಿ ಕೆಲಸ ಸ್ವೀಕರಿಸದಂತೆ ಮಾಡಿದರು. ಆರೋಪದ ವಾಸನೆಗೂ ಆಸ್ಪದ ಕೊಡಬಾರದೆಂದು ಅಷ್ಟು ಜಾಗರೂಕತೆ. ಇವರಿಗೆ ಕೆಲಸ ಕೊಡಿ, ಕೊಡಿಸಿ ಎಂಬ 'ಶಿಫಾರಸ್' ಪತ್ರ ಕೂಡ ಕೊಡುತ್ತಿರಲಿಲ್ಲ ಆದರೂ ಇವರಿಂದ ಬೇರೆ ವಿಧದಲ್ಲಿ ಸಹಾಯ ಪಡೆಯದ ಬಂಧುಗಳು ಅತಿ ವಿರಳ. ವರ್ಷಕ್ಕೆ ೨೫,೦೦೦ ರೂಪಾಯಿಗಳಂತೆ ಬಂಧುಗಳಿಗೂ, ಆಪ್ತರಿಗೂ ಹಂಚಿಕೆಯಾಗುತ್ತಿತ್ತು ಇವರ ವೇತನದಿಂದ. ಈಗಲೂ ಸಹ ನಿವೃತ್ತಿವೇತನದಲ್ಲಿ ಸ್ವಲ್ಪ ಭಾಗವನ್ನು ತಮಗಾಗಿ ಉಳಿಸಿಕೊಂಡು, ಮಿಕ್ಕ ಬಹು ಭಾಗವನ್ನು ಬಂಧು ಬಳಗಕ್ಕೆ ಹಂಚಿಬಿಡುತ್ತಾರೆ

ಸರ್ಕಾರಿ ಕೆಲಸದ ಮೇಲೆ ಸಂಚಾರ ಹೊರಟಾಗ ಜೊತೆಯಲ್ಲಿ ಎರಡು ಮೇಣದ ಬತ್ತಿಯ ಕಟ್ಟುಗಳಿರುತ್ತಿದ್ದುವು. ಒಂದು ಸರ್ಕಾರದ ವೆಚ್ಚದಲ್ಲಿ ಕೊಂಡದ್ದು. ಮತ್ತೊಂದು ಸ್ವಂತ ಹಣದಲ್ಲಿ. ಸರ್ಕಾರಿ ಕೆಲಸ ಮುಗಿದ ಮೇಲೆ, ಸ್ವಂತ ಕಾಗದ ಪತ್ರಗಳನ್ನು ರಾತ್ರೆ ಬರೆಯಲು ಕುಳಿತಾಗ ತಮ್ಮ ಸ್ವಂತ ಖರ್ಚಿನ ಮೇಣದ ಬತ್ತಿ ಹಚ್ಚಿ ಉರಿಸುವರು. ಕಾಗದ ಬಳಸುವುದೂ ಹಾಗೆಯೇ. ಸರ್ಕಾರಿ ಕಾಗದದಲ್ಲಿ ತಮ್ಮ ಖಾಸಗಿ ವ್ಯವಹಾರದ

ಪತ್ರ ಬರೆಯುರು ಅಷ್ಟು ನಿಷ್ಠುರ, ನಿಷ್ಕಳಂಕ, ನಿಸ್ಪೃಹ, ಸತ್ಯ ಜೀವನ. ಸರ್ಕಾರದ ಕೆಲಸದ ಮೇಲೆ ದೇಶ ನೋಡಿಬರಲು ಹೋಗುವಾಗ ಜೊತೆಯಲ್ಲಿಯೇ ಅಡಿಗೆಯವನು ಸಕಲ ಸಾಮಗ್ರಿಗಳೊಡನೆ ಮುಂದಾಗಿ ಹೋಗಿ ಊಟ ಸಿದ್ಧಮಾಡುವನು. ಬೇರೆಯವರಲ್ಲಿ ಊಟ ಸಹ ಮಾಡರು

ಸರಕಾರದ ಹಣವನ್ನು ಸ್ವಂತಕ್ಕಾಗಿ ವೆಚ್ಚಮಾಡಕೂಡದು ಎಂಬುದರಲ್ಲಿ ಇವರದೇ ಒಂದು ಐತಿಹ್ಯವಿದೆ. ಶ್ರೀಮನ್ಮಹಾರಾಜರಿಗೆ ತಮ್ಮ ರಾಜೀನಾಮೆಯನ್ನು ಸಲ್ಲಿಸಲು ಹೋದುದು ದಿವಾನರಾಗಿ ಸರಕಾರದ ವಾಹನದಲ್ಲಿ. ಕಾಗದ ಕೊಟ್ಟು ಹಿಂತಿರುಗಲು ತಮ್ಮ ಸ್ವಂತ ಮೋಟಾರು ಅರಮನೆಯ ಬಳಿ ಸಿದ್ಧ! ಅರಮನೆಯಿಂದ ಹೊರಕ್ಕೆ ಬರುತ್ತಲೇ ಇನ್ನು ನಾನು ಸರಕಾರದ ನೌಕರನಲ್ಲ ಎಂದು ಸರಕಾರದ ಗಾಡಿಯನ್ನು ಬಿಟ್ಟು ತಮ್ಮ ಸ್ವಂತ ಮೋಟಾರನ್ನು ಹತ್ತಿದರು. ಅದರಲ್ಲಿಯೇ ನಿವೃತ್ತ ದಿವಾನರಾಗಿ ವಾಪಸ್. ಅದೆಷ್ಟು ನಿಸ್ಪೃಹತೆ!

ಇಪ್ಪತ್ತೈದು ವರುಷಗಳಿಗಿಂತ ಹೆಚ್ಚು ಕಾಲ ಬೆಂಗಳೂರಿನಲ್ಲಿ ವಾಸ ಮಾಡಿಕೊಂಡಿದ್ದರೂ ಸ್ವಂತಕ್ಕಾಗಿ ಒಂದು ಮನೆ ಸಹ ಇವರು ಮಾಡಿಕೊಂಡಿಲ್ಲ. ಭದ್ರಾವತಿ ಕಾರ್ಖಾನೆಯ ಅಧ್ಯಕ್ಷರಾಗಿ ತಮಗೆ ಸಂದ ಸುಮಾರು ಎರಡು ಲಕ್ಷ ರೂಪಾಯಿ ಬೆಂಗಳೂರಿನ ಔದ್ಯೋಗಿಕ ಶಿಕ್ಷಣಾಲಯಕ್ಕೆ ದತ್ತಿ. ಶಿಕ್ಷಣಾಲಯಕ್ಕೆ ತಮ್ಮ ಹೆಸರು ಕೊಡಲು ನಿರಾಕರಿಸಿ, ಶ್ರೀಮನ್ಮಹಾರಾಜರವರು ತಮ್ಮ ಹೆಸರಿನಿಂದ ಅದನ್ನು ಸನ್ಮಾನಿಸುವಂತೆ ಮಾಡಿರುತ್ತಾರೆ.

ಇಂದಿಗೆ ವಿಶ್ವೇಶ್ವರಯ್ಯನವರಿಗೆ ೯೩ ತುಂಬಿತು 'ಪರಮಾತ್ಮ ಮತ್ತೆ ಆಯುಷ್ಯ ಕೊಟ್ಟರೆ, ಬಾಳ ಬಯಸುವಿರಾ?' ಎಂಬ ಪ್ರಶ್ನೆಗೆ—'ಖಂಡಿತವಾಗಿಯೂ' ಎಂಬ ಉತ್ತರ ಇನ್ನು ಯಾವ ನಿಷ್ಕಳಂಕ ನಿಸ್ವಾರ್ಥ ಜೀವ ಕೊಡಬಲ್ಲದು. ಈ ಬಾಳು ಚಿರಕಾಲ ಬೆಳಗಲಿ.

**ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಂ ಸಮಾಃ**

---

# ಅ. ನ. ಕೃ. ಅವರ ಗ್ರಂಥಗಳು

## ನಮ್ಮ ಪ್ರಕಟನೆಗಳು

---

**ಕಾದಂಬರಿ**

| | ರೂ. ಆ. |
|---|---|
| ಶ್ರೀಮತಿ | 4-12 |
| ಚಿತ್ರವಿಚಿತ್ರ | 4-4 |
| ಅರುಳು ಮರುಳು | 4-8 |
| ತಾಯಿಯ ಕರುಳು | 4-12 |
| ಅಮರ ಆಗಸ್ಟ್ | 2-0 |
| ಹೊಸಲು ದಾಟಿದ ಹೆಣ್ಣು | 2-15 |
| ಸಂಧ್ಯಾರಾಗ | 2-4 |
| ಉದಯರಾಗ | 1-12 |
| ಜೀವನ ಯಾತ್ರೆ | 1-12 |
| ಸಾಹಿತ್ಯ ರತ್ನ | 4-0 |
| ಮಾಯ್ಯಿಗೆ ಮುಯ್ಯಿ | 2-4 |
| ಕಣ್ಣೀರು | 2-0 |
| ಕಾಲಚಕ್ರ | 3-6 |

**ಕಥಾಸಂಗ್ರಹ**

| | |
|---|---|
| ಕಿಡಿ | 1-4 |
| ಶಿಲ್ಪಿ | 1-4 |
| ಮಿಂಚು | 1-8 |

**ನಾಟಕ**

| | |
|---|---|
| ಅಗ್ನಿಕನ್ಯೆ | (ಅಚ್ಚಿನಲ್ಲಿ) |
| ಮದುವೆಯೋ ಮನೆಹಾಳೋ | 1-8 |
| ರಜಪೂತಲಕ್ಷ್ಮಿ | 1-12 |
| ಗೋಮುಖ ವ್ಯಾಘ್ರ | 0-8 |
| ಸ್ವರ್ಣ ಮೂರ್ತಿ | 0-12 |
| ಹಿರಣ್ಯಕಶಿಪು | 0-12 |
| ಕಿತ್ತೂರ ರಾಣಿ ಚೆನ್ನಮ್ಮ | 0-12 |
| ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ (ಭಾಗ ೨) | 1-8 |

**ಪ್ರಬಂಧಗಳು**

| | |
|---|---|
| ಸಾಹಿತ್ಯ ಮತ್ತು ಯುಗ ಧರ್ಮ | 2-0 |
| ಕನ್ನಡ ಕುಲರಸಿಕರು | 2-8 |
| ಕರ್ನಾಟಕ ಕಲಾವಿದರು (ಭಾಗ ೨) | 4-15 |

---


## ಆನಂದ್ ಬ್ರದರ್ಸ್

ಪ್ರಕಾಶಕರು

**ಕೆಂಪೇಗೌಡ ರಸ್ತೆ, ಬೆಂಗಳೂರು ೨.**


Khoday's
INDIA'S BEST
STATIONERY
ARTICLES
STAMP PAD
TYPEWRITER
RIBBON
INK
POWDER
KHODAY
SUPERFINE
DUPLICATOR
INK
CARBON PAPER
Ink
M.V. Sampat